

# ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್
# ಕರ್ನಾಟಕ

ಹೆಚ್ಚು ಹೆಚ್ಚು ಯುವಜನರತ್ತ ಸ್ಕೌಟ್ ಮತ್ತು ಗೈಡ್ ಚಳವಳಿ




- 5 ರಿಂದ 10 ವರ್ಷದ ಬಾಲಕ-ಬಾಲಕಿಯರು (ಕಬ್ಸ್ ಮತ್ತು ಬುಲ್‌ಬುಲ್ಸ್)
- 10 ರಿಂದ 17 ವರ್ಷದ ಬಾಲಕ-ಬಾಲಕಿಯರು (ಸ್ಕೌಟ್ಸ್ ಮತ್ತು ಗೈಡ್ಸ್)
- 16 ರಿಂದ 25 ವರ್ಷದ ಯುವಕ-ಯುವತಿಯರು (ರೋವರ್ಸ್ ಮತ್ತು ರೇಂಜರ್ಸ್)

**ಸ್ಕೌಟ್ ಮತ್ತು ಗೈಡ್ ಚಳವಳಿಯು ಮಾನವ ನಿರ್ಮಾಣದ ಒಂದು ಮಹತ್ವದ ಶಿಕ್ಷಣ**



2007
ಸ್ಕೌಟ್ ಶತಮಾನೋತ್ಸವ
ನೂರು ವರ್ಷಗಳ ಭರವಸೆ

## ಉತ್ತಮ ನಾಗರಿಕರಾಗಲು ಸ್ಕೌಟ್ ಮತ್ತು ಗೈಡ್ ಚಳವಳಿಗೆ ಸೇರಿರಿ

ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ಸಂಸ್ಥೆಯು
ವಿಶ್ವ ಸ್ಕೌಟ್ ಸಂಸ್ಥೆ (ಜಿನೀವಾ) ಮತ್ತು ವಿಶ್ವ ಗರ್ಲ್ ಗೈಡ್ ಮತ್ತು
ಗರ್ಲ್ ಸ್ಕೌಟ್ ಸಂಸ್ಥೆ (ಲಂಡನ್)ನ ಅಂಗಸಂಸ್ಥೆ

# ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್, ಕರ್ನಾಟಕ

**ಪೋಷಕರು :**

ಶ್ರೀ ಟಿ. ಎನ್. ಚತುರ್ವೇದಿ

ಘನತೆವೆತ್ತ ರಾಜ್ಯಪಾಲರು

**ಉಪಾಧ್ಯಕ್ಷರುಗಳು :**

ಪ್ರೊ. ಬಿ.ಕೆ. ಚಂದ್ರಶೇಖರ್

ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣ ಸಚಿವರು

ಶ್ರೀ ಎಸ್. ಎಸ್. ಮಲ್ಲಿಕಾರ್ಜುನ್

ಯುವಜನ ಸೇವಾ ಮತ್ತು ಕ್ರೀಡಾ ಸಚಿವರು

ಶ್ರೀ ಪಿ.ಜಿ. ಆರ್. ಸಿಂಧ್ಯ

ಶಾಸಕರು ಮತ್ತು ಮಾಜಿ ಮಂತ್ರಿಗಳು

ಡಾ|| ಎಸ್. ಎಸ್. ಸಿದ್ಧಾರಡ್ಡಿ

ಶ್ರೀಮತಿ ಲಲಿತ ಕೃಷ್ಣಸ್ವಾಮಿ

ಶ್ರೀಮತಿ ಜಯಮ್ಮ ಮಲ್ಲಿಕಾರ್ಜುನಸ್ವಾಮಿ

**ಸಹಾಯಕ ರಾಜ್ಯ ಆಯುಕ್ತರುಗಳು :**

ಶ್ರೀ ಗೊ.ರು. ಚನ್ನಬಸಪ್ಪ
(ಪ್ರಕಟಣಾ ವಿಭಾಗ)

ಶ್ರೀ ಟಿ. ಎಸ್. ಲೂಕಾಸ್
(ಯೋಜನೆ ಮತ್ತು ಅಭಿವೃದ್ಧಿ)

ಶ್ರೀ ಎನ್. ಚಂದ್ರಶೇಖರ್
(ಕಾರ್ಯ ಯೋಜನೆಗಳು)

ಶ್ರೀ ಎಂ. ಎಸ್. ನಟರಾಜ್
(ನಿಧಿ ಸಂಗ್ರಹಣೆ)

ಶ್ರೀ ಕೆ.ವಿ. ಶಂಕರಪ್ಪ
(ಬೆಂಗಳೂರು ವಿಭಾಗ)

ಶ್ರೀ ಕೆ. ಎ. ಸೋಮಣ್ಣ
(ಮೈಸೂರು ವಿಭಾಗ)

ಶ್ರೀ ಕೆ. ತಿಮ್ಮಯ್ಯ
(ಗುಲ್ಬಾರ್ಗ ವಿಭಾಗ)

ಶ್ರೀಮತಿ ಗೀತಾ ನಟರಾಜ್
(ಬೆಂಗಳೂರು ವಿಭಾಗ)

ಶ್ರೀಮತಿ ರತ್ನ ವಿ. ಕುಶನೂರ್
ವಿಧಾನ ಪರಿಷತ್ ಸದಸ್ಯರು
(ಗುಲ್ಬಾರ್ಗ ವಿಭಾಗ)



**ಅಧ್ಯಕ್ಷರು :**

ಶ್ರೀ ಎಸ್. ಎಂ. ಕೃಷ್ಣ

ಮಾನ್ಯ ಮುಖ್ಯಮಂತ್ರಿಗಳು

**ರಾಜ್ಯ ಮುಖ್ಯ ಆಯುಕ್ತರು :**

ಶ್ರೀ ಕೊಂಡಜ್ಜಿ ಬ. ಷಣ್ಮುಖಪ್ಪ

**ರಾಜ್ಯ ಆಯುಕ್ತರುಗಳು :**

ಶ್ರೀ ಸಿ. ಆರ್. ಮಹಮದ್ ಜಹಿರುದ್ದೀನ್

ಶ್ರೀಮತಿ ಎಂ.ಜಿ. ಬೋಪಯ್ಯ

**ರಾಜ್ಯ ಕೋಶಾಧಿಕಾರಿ :**

ಪ್ರೊ || ಎಂ. ಸೂರ್ಯನಾರಾಯಣಪ್ಪ

**ರಾಜ್ಯ ಜಂಟಿ ಕಾರ್ಯದರ್ಶಿಗಳು :**

ಶ್ರೀ ಎ. ಶಿವಮಹಾದೇವನ್

ಶ್ರೀಮತಿ ಎಂ. ಶಾಂತಿಮತಿ

**ಸ್ಥಾನಿಕ ಆಯುಕ್ತರಗಳು :**

ಶ್ರೀ ಮಹಮದ್ ವಾಸಿಲ್
(ಕಾರ್ಯಕ್ರಮಗಳು)

ಶ್ರೀ ಎಸ್. ಪಾಲ್‌ರಾಜ್
(ಕಾರ್ಯ ಯೋಜನೆಗಳು)

ಶ್ರೀ ಎಂ. ಎ. ಚೆಲ್ಲಯ್ಯ
(ಮಾಹಿತಿ ಮತ್ತು ಸಾರ್ವಜನಿಕ ಸಂಪರ್ಕ)

ಶ್ರೀ ಆರ್. ಚಂದ್ರಶೇಖರನ್
(ಪ್ರಕಟಣೆಗಳು)

ಕು|| ರವಿ ವೆಸ್ಲಿ
(ತರಬೇತಿ)

ಶ್ರೀಮತಿ ಸುಶೀಲಾ ಗೋಪಾಲ್
(ಕಾರ್ಯಕ್ರಮಗಳು)

ಶ್ರೀಮತಿ ಸರೋಜ ವಿ. ನಾಯ್ಡು
(ಯೋಜನೆ ಮತ್ತು ಅಭಿವೃದ್ಧಿ)

ಶ್ರೀಮತಿ ಬಿ. ವಿ. ರಾಮರತ್ನ
(ಕಾರ್ಯ ಯೋಜನೆಗಳು)

**ರಾಜ್ಯ ಸಂಘಟನಾ ಆಯುಕ್ತರುಗಳು**

ಶ್ರೀ ನಾರಾಯಣಶೆಟ್ಟಿ

ಶ್ರೀಮತಿ ಜಾನಕಿ ವೇಣುಗೋಪಾಲ್

**ರಾಜ್ಯ ತರಬೇತಿ ಆಯುಕ್ತರುಗಳು**

ಶ್ರೀ ಮಾದವ್ ಸಿಂಗ್

ಶ್ರೀಮತಿ ಕೆ.ಕೆ. ಲೀಲಾ




GS/19/MSG/03

RAJ BHAVAN
BANGALORE
4TH APRIL, 2003



# MESSAGE

I am happy to know that the Bharat Scouts and Guides, Karnataka is bringing out a Booklet in Kannada for the benefit of Scouts and Guides and General Public.

I am sure the Students, the General Public and the youth would join hands in Nation building actiivties and strive hard for overall development of our Nation.

I send my best wishes on this occasion.

T. N. Chaturvedi

**(T.N. CHATURVEDI)**

His Excellency the Governor of Karnataka is the PATRON of The Bharat Scouts & Guides, Karnataka.

**ಎಸ್. ಎಂ. ಕೃಷ್ಣ**
ಮುಖ್ಯಮಂತ್ರಿ




ಸಿಎಂಪಿ : ಸಂ : 689 : 2002
ಬೆಂಗಳೂರು - 560 001

ದಿನಾಂಕ : 12.11.2002

# ಸಂದೇಶ



ಇಂದು ಇಡೀ ವಿಶ್ವದಲ್ಲಿ ಸಾರ್ವಜನಿಕ ಜೀವನದ ನೆಮ್ಮದಿ ಮತ್ತು ನೈತಿಕ ಮೌಲ್ಯಗಳು ಕುಸಿಯುತ್ತಿರುವ ಒಂದು ಕಳವಳಕಾರಿ ಸನ್ನಿವೇಶದಲ್ಲಿದೆ. ಇದಕ್ಕೆ ಸೂಕ್ತ ಪರಿಹಾರ ಮಾರ್ಗ ಕಂಡು ಕೊಳ್ಳಬೇಕಾದುದು ಇಂದಿನ ಅವಸರದ ಅಗತ್ಯವೆಂದು ನಾನು ಭಾವಿಸಿದ್ದೇನೆ.

ಜನ ಸಮುದಾಯದಲ್ಲಿ ಸಭ್ಯತೆ, ಪ್ರಾಮಾಣಿಕತೆ ಮತ್ತು ಸೇವಾ ಮನೋಭಾವಗಳನ್ನು ನಿರೀಕ್ಷಿಸಬೇಕಾದರೆ, ಬಹುಶಃ ನಾವು ಶಾಲಾ ವಯಸ್ಸಿನ ಹಂತದಲ್ಲೇ ಮಕ್ಕಳಲ್ಲಿ ಆ ಗುಣಗಳು ಮೈಗೂಡುವಂತೆ ಮಾಡಬೇಕಾಗುತ್ತದೆ.

ನಮಗೆಲ್ಲ ತಿಳಿದಿರುವಂತೆ ಮಕ್ಕಳನ್ನು ಶಿಸ್ತಿನ ಮತ್ತು ಹೊಣೆಗಾರಿಕೆಯ ನಾಗರಿಕರನ್ನಾಗಿ ರೂಪಿಸಲು ಇರುವ ಒಂದು ಮಹತ್ವಪೂರ್ಣವಾದ ಚಳವಳಿ ಎಂದರೆ ಸ್ಕೌಟ್ ಮತ್ತು ಗೈಡ್ ಚಳವಳಿ. ಯುವ ಜನಾಂಗದಲ್ಲಿ ಜೀವನ ಶ್ರದ್ಧೆ ಮತ್ತು ನೀತಿ ನಿಯಮಗಳನ್ನು ಬಿತ್ತಿ ಬೆಳೆಸುವ ಒಂದು ಬೃಹತ್ ಸಂಘಟನೆಯಾಗಿದ್ದು. ಈಗ ವಿಶ್ವದ ೨೧೬ಕ್ಕೂ ಹೆಚ್ಚು ರಾಷ್ಟ್ರಗಳಲ್ಲಿ ಕ್ರಿಯಾಶೀಲವಾಗಿದೆ. ಈ ಮಹಾಸಂಸ್ಥೆ ಇನ್ನೈದು ವರ್ಷಗಳಲ್ಲಿ ಶತಮಾನೋತ್ಸವವನ್ನು ಆಚರಿಸಲಿದೆ.

ನಮ್ಮ ಕರ್ನಾಟಕದಲ್ಲಿ ೧೯೧೨ ರಷ್ಟು ಹಿಂದೆಯೇ ಆರಂಭವಾದ ಸ್ಕೌಟ್-ಗೈಡ್ ಚಳವಳಿ ಕಳೆದ ೯ ದಶಕಗಳಿಂದ ನಿರಂತರವಾಗಿ ಅಭಿಮಾನಪೂರ್ಣ. ಸೇವೆ ಸಲ್ಲಿಸಿಕೊಂಡು ಬಂದಿದೆ. ನಾನು ಕೂಡ ನನ್ನ ಶಾಲಾ ದಿನಗಳಲ್ಲಿ ಓರ್ವ ಸ್ಕೌಟ್ ವಿದ್ಯಾರ್ಥಿಯಾಗಿದ್ದುದನ್ನು ಸ್ಮರಿಸಿಕೊಳ್ಳಲು ಸಂತಷವೆನಿಸುತ್ತದೆ. ಚಿಕ್ಕ ವಯಸ್ಸಿನಲ್ಲೇ ವಿದ್ಯಾರ್ಥಿಗಳಲ್ಲಿ ರಾಷ್ಟ್ರೀಯತೆ, ಸಾಹಸ ಪ್ರಿಯತೆ, ಕ್ರೀಡಾ ಮನೋಭಾವ, ಕ್ರಿಯಾಶೀಲತೆ, ಸಚ್ಚಾರಿತ್ರ್ಯ, ಜೀವನ ಕೌಶಲ್ಯ, ನಾಯಕತ್ವ ಮತ್ತು ಉದಾತ್ತ ಜೀವನ ಮೌಲ್ಯಗಳನ್ನು ಮೈಗೂಡಿಸುವ ಸ್ಕೌಟ್ ಮತ್ತು ಗೈಡ್ ಚಳವಳಿ ನಮ್ಮ ಶಿಕ್ಷಣದ ಅವಿಭಾಜ್ಯ ಅಂಗವಾಗಬೇಕೆಂದು ನಾನು ಅಪೇಕ್ಷಿಸುತ್ತೇನೆ.

ಭವಿಷ್ಯದ ಸಭ್ಯ ಜನಾಂಗವನ್ನು ರೂಪಿಸುವ ದೃಷ್ಟಿಯಿಂದ ನಮ್ಮ ಸರ್ಕಾರ ಈ ಚಳವಳಿಗೆ ಹೆಚ್ಚಿನ ಉತ್ತೇಜನ ನೀಡಬಯಸುತ್ತದೆ. ಈ ಹಿನ್ನಲೆಯಲ್ಲಿ ಸಂಬಂಧಪಟ್ಟ ಶಿಕ್ಷಣ ಮತ್ತು ಯುವಜನ ಸೇವಾ ಇಲಾಖೆಗಳು ಅಗತ್ಯ ಗಮನಹರಿಸಬೇಕೆಂದು ಆಶಿಸುತ್ತೇನೆ. ಹಾಗೆಯೇ ನಮ್ಮ ಗ್ರಾಮ, ತಾಲ್ಲೂಕು ಮತ್ತು ಜಿಲ್ಲಾ ಪಂಚಾಯತ್

ಆಡಳಿತಗಳೂ ವಿಶೇಷ ಆಸಕ್ತಿ ವಹಿಸಿ, ಇದೊಂದು ಮಹತ್ವಪೂರ್ಣ ಸೇವೆಯೆಂದು ಪರಿಗಣಿಸಿ ರಾಜ್ಯದ ಎಲ್ಲ ಶಾಲೆಗಳಲ್ಲೂ ಸ್ಕೌಟ್ ಮತ್ತು ಗೈಟ್ ಘಟಕಗಳು ಅಸ್ತಿತ್ವಕ್ಕೆ ಬರುವಂತೆ ಅಗತ್ಯ ಉತ್ತೇಜನ ನೀಡಬೇಕೆಂದು ಮನವಿಮಾಡಿಕೊಳ್ಳುತ್ತೇನೆ.

ಸ್ಕೌಟ್ ಮತ್ತು ಗೈಡ್ ಚಳವಳಿಯ ಸಂಸ್ಥಾಪಕ ಲಾರ್ಡ್ ಬೇಕಡನ್ ಪೊವೆಲ್ ಅವರ "ನೀವು ಸದಾ ಸಂತೋಷದಿಂದಿದ್ದು. ಇತರರನ್ನು ಸಂತೋಷದಿಂದ ಇರುವಂತೆ ಮಾಡಿ ಮತ್ತು ನಿಮಗೆ ಒದಗಿ ಬರುವ ಅವಕಾಶಗಳನ್ನು ಪೂರ್ಣವಾಗಿ ಸದುಪಯೋಗಪಡಿಸಿಕೊಳ್ಳಿ" ಎಂಬ ಮಾತಿನ ಸಾರ್ವಕಾಲಿಕ ಪ್ರಸ್ತುತತೆ ಸದಾ ನಮ್ಮ ನೆನಪಿನಲ್ಲಿರಲಿ.

ಗೌರವಾನ್ವಿತ ಸಮಾಜ ನಿರ್ಮಾಣದ ನಮ್ಮ ಕನಸು ನನಸಾಗಲು ಈ ಮಹಾನ್ ಚಳವಳಿಯನ್ನು ವಿಸ್ತರಿಸಲು ಮತ್ತು ಯಶಸ್ವಿಗೊಳಿಸಲು ನಾವೆಲ್ಲ ಶ್ರಮಿಸೋಣ. ವಿಶೇಷವಾಗಿ ಮಕ್ಕಳ ಪೋಷಕರು ಮತ್ತು ಶಾಲಾ ಉಪಾಧ್ಯಾಯರು ಇದನ್ನು ಒಂದು ಪವಿತ್ರ ಕಾರ್ಯವೆಂದು ಪರಿಭಾವಿಸಿ ತಮ್ಮ ಪಾಲಿನ ಕರ್ತವ್ಯ ನಿರ್ವಹಿಸುವಂತಾಗಬೇಕು.

ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ಸಂಸ್ಥೆ ಇದುವರೆಗೆ ನಡೆದು ಬಂದಿರುವ ಹಾದಿಯಲ್ಲಿ ಕರ್ನಾಟಕ ರಾಜ್ಯ ಘಟಕ ತನ್ನದೇ ಆದ ವಿಶಿಷ್ಟ ಸ್ಥಾನಮಾನ ಗಳಿಸಿರುವ ಬಗೆಗೆ ನಮಗೆಲ್ಲ ಅಭಿಮಾನವಿರಲಿ. ಈ ಚಳವಳಿಯಲ್ಲಿ ನಮ್ಮ ರಾಜ್ಯ ಘಟಕವು ರಾಷ್ಟ್ರೀಯ ಮತ್ತು ಅಂತರ ರಾಷ್ಟ್ರೀಯ ಸ್ಕೌಟ್ಸ್ ಮತ್ತು ಗೈಡ್ಸ್ ನಕ್ಷೆಯಲ್ಲಿ ಮತ್ತಷ್ಟು ಉನ್ನತ ಸ್ಥಾನ ಪಡೆಯುವಂತಾಗಲಿ.

ಸ್ಕೌಟ್ ಮತ್ತು ಗೈಡ್ ಚಳವಳಿಯನ್ನು ನಾವು ಬೆಂಬಲಿಸಿ ಅದನ್ನು ಸದೃಢವಾಗಿ ಬೆಳೆಸಿದೆವೆಂದರೆ, ಒಂದು ಸೌಹಾರ್ದಯುತ ಸಮಾಜ ನಿರ್ಮಾಣಕ್ಕೆ ಭದ್ರ ಅಡಿಪಾಯ ಹಾಕಿದಂತೆ.

**(ಎಸ್. ಎಂ. ಕೃಷ್ಣ)**

ಸನ್ಮಾನ್ಯ ಮುಖ್ಯಮಂತ್ರಿಗಳು, ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್,
ಕರ್ನಾಟಕದ ಗೌರವಾನ್ವಿತ ಅಧ್ಯಕ್ಷರು

# Governor ask M.P$^{s}$, M.L.A$^{s}$, M.L.C.$^{s}$ Zilla Panchayats & Elected Bodies to Support Karnataka Scouts & Guides



Karnataka Scouting and Guiding has an exciting and excellent record of achievements, attainments and awe inspiring success of over eight decades. Blessed with the Royal Patronage, Karnataka Bharat Scouts and Guides, began with Pride, Prestige and Popularity when the then Queen, His Highness and the Yuvaraja spontaneously became respectively the Chief Guide, the Chief Scout and the Chief Cub. Later, School Administration took the responsibility of spreading Scouting and Guiding in the State and presently Karnataka has over 2.20 lakh Scouts and Guides. Scouts and Guides is the largest uniformed voluntary Youth Movement in the State of Karnataka. History records that the First Scout Troop in the country was started in the Bishop Cotton School, Bangalore during 1909, immediately after the commencement of the movement in 1907 by Lord Baden Powell in England.

Educationists, stalwarts and visionaries in Karnataka looked far ahead of times and guided, popularised and gave fillip to the growth of this movement as a complement to educational activity. By 2006 Karnataka has plans to reach a target of about 4 lakhs of Scouts and Guides. The Department of Public Instruction, Department of Youth Services and Sports, Gram Panchayats, Taluk Panchayats, Zilla Panchayats, Municipalities, Corporations all over the State will have to actively support the Movement to achieve this target by 2006.

Keen interest and active involvement of MLA$^{s}$, MLC$^{s}$, Members of Parliament has further strengthened and encouraged the growth and development of this movement in the State. Reservations in allotment of seats in professional courses, technical courses, offer additional impetus to youngsters to join the movement. With the progressive increase year after year, in the qualifying Scouts and Guides for Rajyapuraskar and Rashtrapathi Awards, steps should be taken to increase this Quota to match the growing numbers every year.

To conclude, I wish to appeal to everyone concerned about the Movement to endeavour their best to see that every school in the State is covered with at least one unit of Cub/Bulbul and one unit of Scout & Guide, all over Karnataka. Institutions at higher levels of education should popularise the Rover and Ranger Units to attract more and more youth fired with ideals of good citizenship. Local administrations, NGO$^{s}$ and voluntary agencies should come forward to provide free uniforms to the Volunteering Units. A genuine, Value-Based Human Resource Development Movement called Scouting & Guiding will then grow to shape the careers and fortunes of thousands and thousands of ambitious youth in the State and ultimately in the country.

**T. N. Chaturvedi**
Governor of Karnataka

*Speech delivered by His Excellency the Governor of Karnataka & Patron of Bharat Scouts & Guides Karnataka at Raj Bhavan On 19th June 2003.*

# ನಮ್ಮ ಶಿಕ್ಷಣದ ಅವಿಭಾಜ್ಯ ಅಂಗವಾಗಿ ಭಾರತ್ ಸ್ಕೌಟ್ ಮತ್ತು ಗೈಡ್ಸ್ ಚಳುವಳಿ ಮೂಡಿಬರಬೇಕೆಂಬುದು ನನ್ನ ಆಶೆ



ಅತ್ಯಂತ ಧನ್ಯತಾ ಭಾವದಿಂದ ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್‌ನ ಈ ಪುರಸ್ಕಾರವನ್ನು ಸ್ವೀಕರಿಸಿದ್ದೇನೆ.

ಯುವ ಜನಾಂಗವನ್ನು ರಚನಾತ್ಮಕ ಚಟುವಟಿಕೆಗಳಲ್ಲಿ ತೊಡಗಿಸುವ ಮೂಲಕ ಭವಿಷ್ಯದಲ್ಲಿ ಜವಾಬ್ದಾರಿಯುತ ಪ್ರಜೆಗಳನ್ನಾಗಿಸುವ ಮಹತ್ವದ ಕಾಯಕದಲ್ಲಿ ನಿರತವಾಗಿರುವ ಸ್ಕೌಟ್ಸ್ ಮತ್ತು ಗೈಡ್ಸ್ ಸಂಸ್ಥೆಯ ಸೇವೆ ಅನನ್ಯವಾದದ್ದು.

ವಿಶ್ವದ ೨೧೬ಕ್ಕಿಂತ ಹೆಚ್ಚು ರಾಷ್ಟ್ರಗಳಲ್ಲಿ ಕ್ರಿಯಾಶೀಲವಾಗಿರುವ ಈ ಮಹಾಸಂಸ್ಥೆ ಶತಮಾನೋತ್ಸವದ ಹೊಸ್ತಿಲಲ್ಲಿದೆ.

೯೧೩ರಷ್ಟು ಹಿಂದೆ ಕರ್ನಾಟಕದಲ್ಲಿ ಈ ಚಳುವಳಿ ಪ್ರಾರಂಭವಾಯಿತು. ನಾನು ಕೂಡ ಶಾಲಾ ದಿನಗಳಲ್ಲಿ ಸ್ಕೌಟ್ಸ್‌ನಲ್ಲಿ ಭಾಗಿಯಾಗಿದ್ದುದ್ದನ್ನು ಈ ಸಮಯದಲ್ಲಿ ಸ್ಮರಿಸಿಕೊಳ್ಳುತ್ತಿದ್ದೇನೆ. ನನ್ನ ಜೀವನದ ಮೇಲೆ ವಿಶೇಷವಾಗಿ ವಿದ್ಯಾರ್ಥಿ ದಿಶೆಯಲ್ಲಿ ಅಚ್ಚಳಿಯದ ಪ್ರಭಾವವನ್ನು ಈ ಚಳುವಳಿ ಬೀರಿತ್ತು. ಜೀವನದಲ್ಲಿ ಶ್ರದ್ಧೆ, ಪ್ರೀತಿ, ಸಾಹಸಪ್ರಿಯತೆ, ಕ್ರಿಯಾಶೀಲತೆ ಮತ್ತು ಕ್ರೀಡಾ ಮನೋಭಾವ ರೂಪಿಸಬಲ್ಲ ಸಾಮರ್ಥ್ಯ ಈ ಚಳುವಳಿಗಿರುವುದನ್ನು ಸ್ವಾನುಭವದಿಂದ ಬಲ್ಲೆ. ನಮ್ಮ ಶಿಕ್ಷಣದ ಅವಿಭಾಜ್ಯ ಅಂಗವಾಗಿ ಸ್ಕೌಟ್ಸ್ ಮತ್ತು ಗೈಡ್ಸ್ ಚಳುವಳಿ ಮೂಡಿ ಬರಬೇಕೆಂಬುದು ನನ್ನ ಆಶೆ.

ಶಿಸ್ತಿನ ಸಿಪಾಯಿಗಳನ್ನು ರೂಪಿಸುತ್ತಿರುವ ಈ ಚಳುವಳಿಯಿಂದ ಸಮಾಜಕ್ಕೆ ಬಹುಮುಖ ಸೇವೆ ಸಲ್ಲುತ್ತಿದೆ. ಸಮುದಾಯ ಸೇವೆ, ಆರೋಗ್ಯ ಶಿಬಿರ, ಪರಿಸರ ಸಂರಕ್ಷಣೆ, ವನಸಂರಕ್ಷಣೆ, ಸಾಕ್ಷರತೆ, ನೈರ್ಮಲ್ಯ, ಏಡ್ಸ್‌ನಂತಹ ಮಾರಕ ರೋಗಗಳ ಬಗ್ಗೆ ಅರಿವು ಮೂಡಿಸುವಿಕೆ, ರಕ್ತದಾನ ಶಿಬಿರ ವ್ಯವಸ್ಥೆ ಮೊದಲಾದ ಸೇವಾ ಚಟುವಟಿಕೆಗಳಲ್ಲಿ ಸ್ಕೌಟ್ಸ್ ಮತ್ತು ಗೈಡ್ಸ್, ಕಬ್ಸ್ ಮತ್ತು ಬುಲ್‌ಬುಲ್ಸ್, ರೋವರ್ಸ್ ಮತ್ತು ರೇಂಜರ್ಸ್ - ಈ ಎಲ್ಲಾ ವಿಭಾಗಗಳ ಪ್ರತಿನಿಧಿಗಳು ಸಕ್ರಿಯ ಸೇವೆ ಸಲ್ಲಿಸುತ್ತಿದ್ದಾರೆ. ಸಮಾಜ ಇವರೆಲ್ಲರಿಗೂ ಚಿರಋಣಿಯಾಗಿದೆ.

ಸಂಸ್ಥೆಯ ಸ್ಥಾಪಕ ಲಾರ್ಡ್ ಬೇಡನ್ ಪೊವೆಲ್ ಅವರ ಆಶಯದಂತೆ ಸದಾ ಹರ್ಷಚಿತ್ತರಾಗಿ, ಇತರರೂ ಹರ್ಷಚಿತ್ತರಾಗಿರುವಂತೆ ಶ್ರಮಿಸುತ್ತಿರುವ ಈ ಚಳುವಳಿ ಯಶಸ್ಸಿನ ಹೊಸ ಮಜಲುಗಳನ್ನೇರಲೆಂದು ಆಶಿಸುತ್ತೇನೆ.

ಎಸ್. ಎಂ. ಕೃಷ್ಣ
ಮುಖ್ಯಮಂತ್ರಿ

*ದಿನಾಂಕ 19 ಜೂನ್ 2003ರಂದು ಬೆಂಗಳೂರಿನ ರಾಜಭವನದಲ್ಲಿ ಸ್ಕೌಟ್ಸ್ ಮತ್ತು ಗೈಡ್ಸ್ ಸಂಸ್ಥೆಯ ಅತ್ಯುನ್ನತ ರಾಷ್ಟ್ರ ಪ್ರಶಸ್ತಿ "ಬೆಳ್ಳಿ ಆನೆ"ಯನ್ನು ಗೌರವಾನ್ವಿತ ರಾಜ್ಯಪಾಲರಿಂದ ಸ್ವೀಕರಿಸಿದ ಸಂದರ್ಭದಲ್ಲಿ ಮಾಡಿದ ಭಾಷಣ.*

ಕೊಂಡಜ್ಜಿ ಬ ಷಣ್ಮುಖಪ್ಪ
ರಾಜ್ಯ ಮುಖ್ಯ ಆಯುಕ್ತ
ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್, ಕರ್ನಾಟಕ

ಕೇಂದ್ರ ಕಚೇರಿ
ಬೆಂಗಳೂರು



ಸ್ಕೌಟ್ - ಗೈಡ್ ಚಳವಳಿ ಮುಂದಿನ ನಾಲ್ಕು ವರ್ಷಗಳಲ್ಲಿ ಶತಮಾನೋತ್ಸವ ಆಚರಿಸುವ ಸಂಭ್ರಮ - ಸಡಗರದಲ್ಲಿದೆ. ಜಗತ್ತಿನ 216 ರಾಷ್ಟ್ರಗಳಲ್ಲಿ ಈಗಾಗಲೇ ಹಬ್ಬಿರುವ ಅಂತರಾಷ್ಟ್ರೀಯ ಚಳವಳಿಗೆ ಪ್ರತಿವರ್ಷ ಮತ್ತೊಂದು ರಾಷ್ಟ್ರ ಸೇರ್ಪಡೆಯಾಗುತ್ತಿದೆ. 2.80 ಕೋಟಿ ಸಮವಸ್ತ್ರಧಾರಿಗಳನ್ನು ಹೊಂದಿರುವ ಚಳವಳಿ ಹೆಚ್ಚಾಗಿ ಬೆಳೆದು, ನಮ್ಮ ರಾಷ್ಟ್ರದ ಹಾಗೂ ರಾಜ್ಯದ ಶಾಲೆಯ ಎಲ್ಲ ಮಕ್ಕಳು ಮಾನವ ವ್ಯಕ್ತಿತ್ವ ವಿಕಸನ ನಿರ್ಮಾಣದ ಮಹತ್ವದ ಸ್ಕೌಟ್-ಗೈಡ್ ಶಿಕ್ಷಣ ಪಡೆಯುವುದು ಇಂದಿನ ಅವಶ್ಯಕತೆಯಾಗಿದೆ.

ಭಾರತದಲ್ಲಿ ೩೬ ಲಕ್ಷ ಸಂಖ್ಯಾ ಬಲವುಳ್ಳ, ಕರ್ನಾಟಕದಲ್ಲಿ ೨.೨೦ ಲಕ್ಷ ಸದಸ್ಯರನ್ನುಳ್ಳ ಚಳವಳಿಯ ಹೆಜ್ಜೆ ಗುರುತುಗಳನ್ನು ಮುಂದಿನ ಮೂರು ವರ್ಷಗಳಲ್ಲಿ ೪ ಲಕ್ಷ ಮುಟ್ಟುವ ಆಶಯ ಚಳವಳಿಯ ವಿವಿಧ ಹಂತಗಳಲ್ಲಿ ಕಾರ್ಯ ನಿರ್ವಹಿಸುತ್ತಿರುವ ಎಲ್ಲಾ ಸ್ವಯಂ ಸೇವಕರುಗಳ, ಸ್ಥಳೀಯ ಹಾಗೂ ಜಿಲ್ಲಾ ಸಂಸ್ಥೆಗಳದು.

ನಮ್ಮ ರಾಜ್ಯದಲ್ಲಿ ಚಳವಳಿ ಪ್ರಾರಂಭವಾಗಿ ೮೬ ವರ್ಷಗಳಾಗಿವೆ. ಸ್ಕೌಟ್-ಗೈಡ್ ಚಳವಳಿಯ ದಿಟ್ಟ ಹೆಜ್ಜೆ ಗುರುತುಗಳು ರಾಜ್ಯದೆಲ್ಲೆಡೆ ಹಬ್ಬಿದ್ದು, ಎಲ್ಲಾ ಶಾಲೆಗಳಲ್ಲಿ ಒಂದು ಕಬ್-ಬುಲ್‌ಬುಲ್, ಸ್ಕೌಟ್-ಗೈಡ್, ರೋವರ್-ರೇಂಜರ್ ಘಟಕ ತೆರೆಯುವ ಆಶಯ ಫಲಪ್ರದವಾಗಬೇಕಾದರೆ ಸಂಸ್ಥೆಯ ವಿವಿಧ ಹಂತಗಳಲ್ಲಿ ಕೆಲಸ ನಿರ್ವಹಿಸುತ್ತಿರುವ ಕ್ಷೇತ್ರ ಕಾರ್ಯಕರ್ತರುಗಳು ತಮ್ಮ ಕಾರ್ಯವ್ಯಾಪ್ತಿಯಲ್ಲಿ ಬರುವ ಎಲ್ಲಾ ಶಾಲೆಗಳಿಗೂ ಭೇಟಿ ನೀಡಿ, ಶಾಲೆಯ ಶಿಕ್ಷಕ-ಶಿಕ್ಷಕಿಯೊಬ್ಬರಿಗೆ ತರಬೇತಿ ಕೊಡಿಸಿ. ಘಟಕಗಳನ್ನು ಪ್ರಾರಂಭಿಸುವಲ್ಲಿ ಕಾರ್ಯ ಪ್ರವತ್ತರಾಗಬೇಕೆಂದು ವಿನಂತಿಸುತ್ತೇನೆ.

ಅತ್ಯಂತ ವೈಶಿಷ್ಠ ಪೂರ್ಣವಾದ ವ್ಯಕ್ತಿತ್ವ ವಿಕಸನದ ಅಮೂಲ್ಯ ಸಾರವುಳ್ಳ ಮಹತ್ವ ಪೂರ್ಣ ಸ್ಕೌಟ್-ಗೈಡ್ ಶಿಕ್ಷಣವನ್ನು ಚಿಕ್ಕವಯಸ್ಸಿನಲ್ಲೇ ಯುವಕ-ಯುವತಿಯರಿಗೆ ತಲುಪಿಸುವ ಕಾರ್ಯಭಾರ ಹೊತ್ತಿರುವ 7,000 ಕ್ಕೂ ಮೀರಿದ ಸ್ಕೌಟ್ ಮಾಸ್ಟರ್, ಗೈಡ್ ಕ್ಯಾಪ್ಟನ್‌ಗಳಿಗೆ, 1200 ಸಂಖ್ಯೆ ದಾಟಿರುವ ವೃಕ್ಷಮಣಿಧಾರಿಗಳಿಗೆ, 120 ಸಂಖ್ಯಾ ಬಲವುಳ್ಳ ನಾಯಕ ಹಾಗೂ ಸಹಾಯಕ ನಾಯಕ ತರಬೇತುದಾರರಿಗೆ, ಘಟಕಗಳ, ಸ್ಥಳೀಯ ಹಾಗೂ ಜಿಲ್ಲಾ ಸಂಸ್ಥೆಗಳ ಎಲ್ಲಾ ಹಂತದ ಪದಾಧಿಕಾರಿಗಳಿಗೆ ಹೃತ್ಪೂರ್ವಕ ನಮನಗಳು.

ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ಚಳವಳಿಯು ರಾಜ್ಯದ ಮೂಲೆ ಮೂಲೆಯಲ್ಲಿ ಹರಡಬೇಕಾಗಿದೆ. ಇದಕ್ಕಾಗಿ, ಜಿಲ್ಲಾಡಳಿತ, ಜಿಲ್ಲಾ ಪಂಚಾಯತ್, ತಾಲ್ಲೂಕ್ ಪಂಚಾಯತ್, ಪಟ್ಟಣ ಪಂಚಾಯತ್, ಶಾಲೆಗಳ ಮುಖ್ಯಸ್ಥರು ಹಾಗೂ ವಿಧಾನ ಸಭೆ, ವಿಧಾನ ಪರಿಷತ್ ಸದಸ್ಯರು, ಸಂಸತ್ ಸದಸ್ಯರು, ಎಲ್ಲಾ ಜನ ಪ್ರತಿನಿಧಿಗಳು ಹಾಗೂ ಸಾರ್ವಜನಿಕ ಬಂಧುಗಳು ಈ ಸತ್ಕಾರ್ಯದಲ್ಲಿ ಸಹಕರಿಸಲು ಪ್ರಾರ್ಥಿಸುತ್ತೇನೆ.

ಶಿಕ್ಷಣ ಇಲಾಖೆ, ಯುವಜನ ಸೇವಾ ಹಾಗೂ ಕ್ರೀಡಾ ಇಲಾಖೆ ಮತ್ತು ಇತರೆ ಸರ್ಕಾರಿ ಇಲಾಖೆಗಳು ಈ ಚಳವಳಿಯ ಬೆಳವಣಿಗೆಗೆ ಇನ್ನೂ ಹೆಚ್ಚಿನ ಸಹಕಾರ ನೀಡಲು ಪ್ರಾರ್ಥಿಸುತ್ತೇನೆ.

ಸತ್ಯ - ಧರ್ಮ - ಚಾರಿತ್ರ, ಶಾಂತಿ, ಸೇವೆ ಹಾಗೂ ಕ್ರೀಡಾ ಮನೋಭಾವ ಬೆಳಸುವಲ್ಲಿ ತನ್ನ ಛಾಪು ಮೂಡಿಸಿರುವ ಸ್ಕೌಟ್ - ಗೈಡ್ ಚಳವಳಿಯನ್ನು ಬೆಳಸಿಪೋಷಿಸುವಲ್ಲಿ ನಾವೆಲ್ಲಾ ಹೆಚ್ಚು ಶ್ರಮಿಸೋಣ ಎಂದು ತಮ್ಮನ್ನು ಕೋರುತ್ತೇನೆ.

ಕೊಂಡಜ್ಜಿ ಬ ಷಣ್ಮುಖಪ್ಪ

# ಸ್ಕೌಟ್ ಮತ್ತು ಗೈಡ್ ಚಳವಳಿ - ಒಂದು ಸ್ಥೂಲ ನೋಟ



## ಜಾಗತಿಕ



ಲಾರ್ಡ್ ಬೇಡನ್ ಪೊವೆಲ್

ಸ್ಕೌಟ್ ಚಳವಳಿಯನ್ನು ಮೊಟ್ಟ ಮೊದಲು ಇಂಗ್ಲೆಂಡಿನಲ್ಲಿ 1907ರ ಆಗಸ್ಟ್‌ನಲ್ಲಿ ಪ್ರಾರಂಭಿಸಲಾಯಿತು. ಅಂದು ಇಂಗ್ಲೆಂಡಿನ ಬ್ರೌನ್‌ಸೀ ದ್ವೀಪದಲ್ಲಿ ರಾಬರ್ಟ್ ಬೇಡನ್ ಪೊವೆಲ್ ಅವರು ಪ್ರಾಯೋಗಿಕ ಶಿಬಿರ ಆರಂಭಿಸಿದರು. ಬೇಡನ್ ಪೊವೆಲ್ ಅವರೇ ಸ್ಕೌಟ್ ಚಳವಳಿಯ ಜನಕರು. ಕಿರಿ ವಯಸ್ಸಿನ ಸಮುದಾಯದ ಶಕ್ತಿ ಸಾಮರ್ಥ್ಯಗಳಿಗೆ ಶಿಸ್ತು, ಸಂಘಟನೆ ಮತ್ತು ಸೇವೆಯ ಸ್ವರೂಪ ಕೊಡುವುದೇ ಬೇಡನ್ ಪೊವೆಲ್ ಅವರ ಆಶಯವಾಗಿತ್ತು.

ಮಕ್ಕಳಲ್ಲಿ ನಿಸರ್ಗದ ಒಲವು ಮೂಡಿಸಿ ಅವರು ಸದಾ ಗೆಲುವಿನಿಂದ ಇರುವಂತೆ ಮಾಡುವ ಒಂದು ವಿಶಿಷ್ಟ ಶಿಕ್ಷಣವೇ ಸ್ಕೌಟ್ ಕಾರ್ಯಕ್ರಮ. ಕಟ್ಟಡದಲ್ಲಿ ನಡೆಯುವ ಪಾಠ-ಪ್ರವಚನಗಳ ಜೊತೆಗೆ ನಿಸರ್ಗದ ಪರಿಸರದಲ್ಲಿ ಆಡಿ ನಲಿಯುವ, ನೋಡಿ ಕಲಿಯುವ ಅವಕಾಶವಿರುವಂತೆ ಮತ್ತು ಹರಿಯುವ ನದಿ, ನಿಂತ ಬೆಟ್ಟ, ಹಾರಾಡುವ ಪಕ್ಷಿ, ಅಡ್ಡಾಡುವ ಪ್ರಾಣಿ, ಸುಳಿಯುವ ಗಾಳಿ - ಹೀಗೆ ಪ್ರಕೃತಿಯ ಒಂದೊಂದು ಅಂಶವೂ ಮಕ್ಕಳಿಗೆ ಮಾದರಿಯಾಗುವಂತೆ ಬೇಡನ್ ಪೊವೆಲ್ ಸ್ಕೌಟ್ ಚಟುವಟಿಕೆಗಳನ್ನು ರೂಪಿಸಿದರು.



ಓಲೇವ್ ಲೇಡಿ ಬೇಡನ್ ಪೊವೆಲ್

ಅವರ ವಿಚಾರಧಾರೆ 'ಸ್ಕೌಟಿಂಗ್ ಫಾರ್ ಬಾಯ್ಸ್' ಎಂಬ ಪುಸ್ತಕದಲ್ಲಿ ಸ್ಪಷ್ಟವಾಗಿ ನಿರೂಪಿತವಾಗಿದೆ. ಅವರ ಕಾರ್ಯಕ್ರಮ ಜಾಗತಿಕ ಅನ್ವಯದ ಸೂತ್ರವಾದ ಕಾರಣ ಯುವಜನಾಂಗಕ್ಕೆ ಬಹಳ ಬೇಗ ಹಿಡಿಸಿತು. ಕಿರಿಯ ವಯಸ್ಸಿನವರ ಉತ್ಸಾಹ ಮತ್ತು ಸಾಹಸಾಪೇಕ್ಷೆಗಳನ್ನು ಪೂರೈಸುವ ಮತ್ತು ಸುಲಭವಾಗಿ ಹೊಂದಿಕೊಳ್ಳಬಹುದಾದಂತಹ ಸ್ಕೌಟ್ ಚಳವಳಿಯ ಚಟುವಟಿಕೆಗಳು ಕಿರಿಯರಿಗಷ್ಟೇ ಅಲ್ಲ, ಅವರಿರುವ ಇಡೀ ಸಮಾಜಕ್ಕೆ ಹಿಡಿಸಿದವು. ಸಭ್ಯ ಸಮಾಜ ನಿರ್ಮಾಣಕ್ಕೆ ಸ್ಕೌಟ್ ಒಂದು ಪರಿಣಾಮಕಾರಿ ಮಾರ್ಗವೆಂದು ಎಲ್ಲರಿಗೂ ಮನವರಿಕೆಯಾಯಿತು.

ಈಗ ವಿಶ್ವದ 216 ರಾಷ್ಟ್ರಗಳು ಮತ್ತು ಪ್ರಾಂತ್ಯಗಳಲ್ಲಿ 28 ದಶಲಕ್ಷಕ್ಕೂ ಹೆಚ್ಚು ಜನ ಸ್ಕೌಟ್/ಗೈಡ್ ಚಳವಳಿಯ ವಾಹಿನಿಗೆ ಸೇರಿದ್ದಾರೆ. ಇವರಲ್ಲಿ ಕಿರಿಯರೂ ಇದ್ದಾರೆ; ಹಿರಿಯರೂ ಇದ್ದಾರೆ. ಹುಡುಗರೂ ಇದ್ದಾರೆ; ಹುಡುಗಿಯರೂ ಇದ್ದಾರೆ. ಸ್ತ್ರೀ-ಪುರುಷ ಭೇದವಿಲ್ಲದೆ ಈ ಚಳವಳಿಯಲ್ಲಿ ಸೇರಿ ಸೇವೆ ಸಲ್ಲಿಸುತ್ತಿದ್ದಾರೆ. ವಿಶ್ವದ 151 ದೇಶಗಳಲ್ಲಿ ಅಂತಾರಾಷ್ಟ್ರೀಯ ಮನ್ನಣೆ ಪಡೆದ ರಾಷ್ಟ್ರೀಯ ಸ್ಕೌಟ್ ಸಂಸ್ಥೆಗಳಿವೆ.

**ವಿಶ್ವ ಸ್ಕೌಟ್ ಸಂಸ್ಥೆಗೆ ಆರು ವಲಯಗಳಿವೆ:**

1. ಆಫ್ರಿಕಾ 2. ಅರಬ್ 3. ಏಷಿಯಾ ಪೆಸಿಫಿಕ್ 4. ಯುರೇಷಿಯಾ 5. ಯೂರೋಪಿಯನ್ ಮತ್ತು 6. ಅಂತರ ಅಮೇರಿಕಾ



ವಿಶ್ವ ಸ್ಕೌಟ್ ಲಾಂಛನ

**ವಿಶ್ವ ಗರ್ಲ್ ಗೈಡ್ ಮತ್ತು ಗರ್ಲ್ ಸ್ಕೌಟ್ ಸಂಸ್ಥೆಗೆ ಐದು ವಲಯಗಳಿವೆ:**

1. ಆಫ್ರಿಕಾ 2. ಅರಬ್ 3. ಏಷಿಯಾ ಪೆಸಿಫಿಕ್ 4. ಯುರೋಪ್ 5. ಪಶ್ಚಿಮಾರ್ಧಗೋಳ



ವಿಶ್ವ ಗೈಡ್ ಲಾಂಛನ

# ಭಾರತದಲ್ಲಿ

**ಪ್ರಧಾನ ಪೋಷಕರು :** ಘನತೆವೆತ್ತ ರಾಷ್ಟ್ರಪತಿಗಳು

**ಪೋಷಕರು :** ಘನತೆವೆತ್ತ ಉಪರಾಷ್ಟ್ರಪತಿಗಳು



ಡಾ. ಅನಿಬೆಸೆಂಟ್

ಸ್ಕೌಟ್ ಚಟುವಟಿಕೆ ಭಾರತದಲ್ಲಿ ಮೊದಲ ಬಾರಿಗೆ ಪ್ರಾರಂಭಿಸಿದ್ದು 1909ರಲ್ಲಿ; ಕರ್ನಾಟಕದ ಬೆಂಗಳೂರಿನ ಬಿಷಪ್ ಕಾಟನ್ ಶಾಲೆಯಲ್ಲಿ; ಒಂದು ಬಾಯ್ ಸ್ಕೌಟ್ ತಂಡದ ರೂಪದಲ್ಲಿ. ಅದನ್ನು ಆರಂಭಿಸಿದವರು ಓರ್ವ ನಿವೃತ್ತ ಸೈನ್ಯಾಧಿಕಾರಿ. ಅವರ ಹೆಸರು ಕ್ಯಾಪ್ಟನ್ ಟಿ.ಹೆಚ್. ಬೇಕರ್. ಸುಮಾರು ಅದೇ ಸಂದರ್ಭದಲ್ಲಿ ಲೆಫ್ಟಿನೆಂಟ್ ಕರ್ನಲ್ ಪಕೆನ್ಹಮ್ ವಾಲ್ಷ್ ಎಂಬುವರಿಂದ ಜಬಲ್‌ಪೂರದಲ್ಲೂ, ಕ್ಯಾಪ್ಟನ್ ಟಾಡ್ ಅವರಿಂದ ಪುಣೆಯ ಬಳಿ ಕರ್ಕಿಯಲ್ಲೂ ಅಂತಹ ಸ್ಕೌಟ್ ತಂಡಗಳು ಆರಂಭವಾದವು. ಆದರೆ ಈ ತಂಡಗಳಲ್ಲಿ ಯೂರೋಪಿಯನ್ ಮತ್ತು ಆಂಗ್ಲೋ-ಇಂಡಿಯನ್ ಹುಡುಗರಿಗೆ ಮಾತ್ರ ಪ್ರವೇಶಾವಕಾಶವಿತ್ತು.

ವಾಸ್ತವವಾಗಿ ಭಾರತದಲ್ಲಿ ಸ್ಕೌಟ್ ಚಳವಳಿ ಅಧಿಕೃತವಾಗಿ ಆರಂಭಗೊಂಡದ್ದು 1917ರ ಮಾರ್ಚ್ 21ರಂದು. ನಂತರ ಕ್ರಮೇಣ ದೇಶದ ನಾನಾ ಭಾಗಗಳಲ್ಲಿ ಸ್ಕೌಟ್ ತಂಡಗಳು ಹುಟ್ಟಿಕೊಳ್ಳತೊಡಗಿದವು. ಬಾಲಕರಿಗೆ ಸ್ಕೌಟ್ ಇದ್ದಂತೆ ಬಾಲಕಿಯರಿಗಾಗಿ ಗೈಡ್ ಸಂಘಟನೆಗಳೂ ಆರಂಭವಾದವು. ಭಾರತಕ್ಕೆ ಸ್ವಾತಂತ್ರ್ಯ ಬರುವ ಮುನ್ನ ಬಾಯ್ ಸ್ಕೌಟ್ಸ್ ಅಸೋಸಿಯೇಷನ್ ಆಫ್ ಇಂಡಿಯಾ, ಇಂಡಿಯನ್ ಬಾಯ್ ಸ್ಕೌಟ್ಸ್ ಅಸೋಸಿಯೇಷನ್, ಹಿಂದೂಸ್ತಾನ್ ಸ್ಕೌಟ್ಸ್ ಅಸೋಸಿಯೇಷನ್, ಗರ್ಲ್ ಗೈಡ್ ಅಸೋಸಿಯೇಷನ್ - ಹೀಗೆ ಅನೇಕ ಸಂಘಟನೆಗಳಿದ್ದವು. 1947ರಲ್ಲಿ ದೇಶಕ್ಕೆ ಸ್ವಾತಂತ್ರ್ಯ ಬಂದ ನಂತರ ಈ ಎಲ್ಲ ಸಂಘಟನೆಗಳೂ ಒಂದು ಗೂಡಿ ಒಂದೇ ಸಂಘಟನೆಯಾಗಬೇಕೆಂದು ನಿರ್ಧರಿಸಿದವು. ಆ ನಿರ್ಧಾರದ ಫಲವೇ 1950ರ ನವಂಬರ್ 27ರಂದು ರೂಪುಗೊಂಡ ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ಮಹಾಸಂಸ್ಥೆ.

ಹೀಗೆ ಒಟ್ಟುಗೂಡಬೇಕೆಂಬ ರಾಷ್ಟ್ರೀಯ ಸ್ಕೌಟ್ ಮತ್ತು ಗೈಡ್ ಚಳವಳಿಯ ಕನಸು ಸ್ವತಂತ್ರ ಭಾರತದಲ್ಲಿ ನನಸಾಗಿದ್ದು 1951ರ ಆಗಸ್ಟ್ 15 ರಂದು. ಅಲ್ಲಿಂದೀಚೆಗೆ 'ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್' ಹೆಸರಿನಲ್ಲಿ ದೇಶದ ಎಲ್ಲ ಕಡೆ ಈ ಚಳವಳಿ ವಿಸ್ತಾರಗೊಳ್ಳುತ್ತ ಬಂದಿತು.

ಈಗ ದೇಶದಲ್ಲಿ, ಕಂದಾಯ ರಾಜ್ಯಗಳು, ಭಾರತೀಯ ರೈಲ್ವೆ ವಲಯಗಳು ಮತ್ತು ಕೇಂದ್ರೀಯ ಹಾಗೂ ನವೋದಯ ವಿದ್ಯಾಲಯ ಸಂಘಟನೆಗಳೂ ಸೇರಿದಂತೆ ರಾಷ್ಟ್ರೀಯ ಸಂಸ್ಥೆಯ ಅಧೀನದಲ್ಲಿ ಒಟ್ಟು 46 ರಾಜ್ಯ ಸಂಸ್ಥೆಗಳಿವೆ. ಭಾರತದಲ್ಲಿ ಈಗ 36 ಲಕ್ಷಕ್ಕೂ ಹೆಚ್ಚು ಸ್ಕೌಟ್ ಮತ್ತು ಗೈಡ್‌ಗಳಿದ್ದಾರೆ.

# ಕರ್ನಾಟಕದಲ್ಲಿ

**ಪೋಷಕರು :** ಗೌರವಾನ್ವಿತ ರಾಜ್ಯಪಾಲರು

**ಅಧ್ಯಕ್ಷರು :** ಮಾನ್ಯ ಮುಖ್ಯ ಮಂತ್ರಿಗಳು

ಈ ಚಳವಳಿ ಕರ್ನಾಟಕದಲ್ಲಿ ಅಂಕುರವಾದದ್ದು 1917ರಲ್ಲಿ; ಹಿಂದಿನ ಮೈಸೂರು ಮಹಾರಾಜರ ಕಾಲದಲ್ಲಿ. 'ದಿ ಬಾಯ್ಸ್ ಸ್ಕೌಟ್ಸ್ ಆಫ್ ಮೈಸೂರ್' ಎಂಬ ಹೆಸರಿನಲ್ಲಿ ರಾಜಾಶ್ರಯದಲ್ಲಿ ಆರಂಭಗೊಂಡ ಈ ಸಂಸ್ಥೆಗೆ ಅಂದಿನ ಮಹಾರಾಜರಾಗಿದ್ದ ಶ್ರೀ ಕೃಷ್ಣರಾಜ ಒಡೆಯರ್ ಅವರೇ ಪೋಷಕರಾಗಿದ್ದರು. ಅವರ ಸಹೋದರ ಯುವರಾಜ ಶ್ರೀ ಕಂಠೀರವ ನರಸಿಂಹರಾಜ ಒಡೆಯರ್ ಅವರು ಸಂಸ್ಥೆಯ ರಾಜ್ಯ ಮುಖ್ಯಸ್ಥರಾಗಿದ್ದರು. ಆಗಿನ ಮಹಾರಾಜರು 1917ರ ಅಕ್ಟೋಬರ್ 3 ರಂದು ಒಂದು ರಾಜಾಜ್ಞೆ ಹೊರಡಿಸಿ ರಾಜ್ಯದ ಎಲ್ಲ ಜಿಲ್ಲೆಗಳ ಶಾಲೆಗಳಲ್ಲಿ ಸ್ಕೌಟ್ ಚಟುವಟಿಕೆಗಳನ್ನು ಆರಂಭಿಸಬೇಕೆಂದು ಸೂಚಿಸಿದರು.



ಶ್ರೀ ಕಂಠೀರವ ನರಸಿಂಹರಾಜ ಒಡೆಯರ್

ಅದಾದ ಹತ್ತು ವರ್ಷಗಳ ನಂತರ ಅಂದರೆ 1927ರಲ್ಲಿ 'ದಿ ಗರ್ಲ್ ಗೈಡ್ಸ್ ಆಫ್ ಮೈಸೂರ್' ಎಂಬ ಸಂಸ್ಥೆಯು ಸ್ಕೌಟ್ ಸಂಸ್ಥೆಯ ಸೋದರ ಸಂಸ್ಥೆಯಾಗಿ ರೂಪುಗೊಂಡಿತು. ಅದಕ್ಕೆ ಯುವರಾಣಿಯೇ ಮುಖ್ಯ ಗೈಡ್ ಆಗಿದ್ದರು. ಹಾಗೆಯೇ ಯುವರಾಜರಾದ ಶ್ರೀ ಜಯಚಾಮರಾಜ ಒಡೆಯರ್‌ರವರು ಮುಖ್ಯ ಕಬ್ ಆಗಿದ್ದರು. ಆನಂತರ ಈ ಎರಡು ಸಂಘಟನೆಗಳೂ ರಾಜಾಶ್ರಯ, ಸಾರ್ವಜನಿಕರು, ಪ್ರಜಾ ಸರ್ಕಾರದ ಸಾರ್ವಜನಿಕ ಶಿಕ್ಷಣ ಇಲಾಖೆ ಮತ್ತು ಯುವಜನ ಸೇವೆ ಹಾಗೂ ಕ್ರೀಡಾ ಇಲಾಖೆಗಳ ಬೆಂಬಲದಿಂದ ವಿಸ್ತಾರಗೊಂಡವು. 1951ರವರೆಗೆ ಪ್ರತ್ಯೇಕವಾಗಿಯೇ ಬೆಳೆದ ಈ ಎರಡು ಸಂಘಟನೆಗಳು ನಂತರ ಒಂದು ಗೂಡಿ 'ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್' ಎಂಬ ಒಂದೇ ಹೆಸರಿನಲ್ಲಿ ಕಾರ್ಯನಿರ್ವಹಿಸುತ್ತ ಬಂದಿವೆ.



ಶ್ರೀ ಜಯಚಾಮರಾಜ ಒಡೆಯರ್



ಕಳೆದ ಐವತ್ತು ವರ್ಷಗಳಲ್ಲಿ ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್‌ನ ಕರ್ನಾಟಕ ಶಾಖೆ ಅಭಿಮಾನಪಟ್ಟುಕೊಳ್ಳುವಂತಹ ದೃಢವಾದ ಬೆಳವಣಿಗೆಯನ್ನು ಹೊಂದಿದೆ. ಸಂಖ್ಯಾ ದೃಷ್ಟಿಯಿಂದ ಮಾತ್ರವಲ್ಲ, ಸತ್ವದ ದೃಷ್ಟಿಯಿಂದಲೂ ಈ ಚಳವಳಿಗೆ ಕರ್ನಾಟಕ ಮೌಲಿಕ ಕೊಡುಗೆ ನೀಡಿದೆ. ಸ್ಕೌಟ್/ಗೈಡ್ ಸಿದ್ಧಾಂತದ ವಿಶ್ವಾಸ ಮತ್ತು ಭರವಸೆಗಳನ್ನಿಟ್ಟುಕೊಂಡು ಪ್ರಗತಿಯ ಮೆಟ್ಟಲು ಏರುತ್ತಿದೆ. ಕರ್ನಾಟಕದಲ್ಲಿ 2000-2001ರ ಅಂಕಿ ಅಂಶಗಳ ಪ್ರಕಾರ ಸ್ಕೌಟ್ ಮತ್ತು ಗೈಡ್ ಈ ಎರಡೂ ವಿಭಾಗಗಳಲ್ಲಿ ಒಟ್ಟು 2.20 ಲಕ್ಷ ಮಕ್ಕಳಿದ್ದಾರೆ.

ಕರ್ನಾಟಕದಲ್ಲಿ ಆರಂಭವಾದ ಈ ಚಳವಳಿಯ ನೇತಾರರಾಗಿದ್ದ ಪ್ರತಿಯೊಬ್ಬರೂ ತಮ್ಮದೇ ಆದ ಗಮನಾರ್ಹ ಸೇವೆ ಸಲ್ಲಿಸಿದ್ದಾರೆ. 1964ರಿಂದ 1982ರವರೆಗೆ ರಾಜ್ಯ ಮುಖ್ಯ ಆಯುಕ್ತರಾಗಿದ್ದ ಶ್ರೀ ಕೊಂಡಜ್ಜಿ ಬಸಪ್ಪನವರ ಅವಧಿಯಲ್ಲಂತೂ ಈ ಚಳವಳಿಗೆ ಬೃಹತ್ ಪ್ರಮಾಣದ ಚಾಲನೆ ಮತ್ತು ಚೇತನಗಳು ದೊರಕಿದವು. ಅವರ ಕಾಲದಲ್ಲಿ ದೊಡ್ಡಬಳ್ಳಾಪುರದ ಬಳಿ ಇರುವ ಬೆಸೆಂಟ್ ಪಾರ್ಕ್‌ನ ಗಮನಾರ್ಹ ಅಭಿವೃದ್ಧಿ ಕಾರ್ಯ ನಡೆದದ್ದೇ ಅಲ್ಲದೆ, ದಾವಣಗೆರೆ ಬಳಿ ಇರುವ ಕೊಂಡಜ್ಜಿ ತರಬೇತಿ ಶಿಬಿರದ ಸ್ಥಾಪನೆಯೂ ಆಯಿತು. ಕರ್ನಾಟಕದ ಸ್ಕೌಟ್ಸ್ ಮತ್ತು ಗೈಡ್ಸ್ ಚಳವಳಿಯ ಇತಿಹಾಸದಲ್ಲಿ ಈ ಸಾಧನೆಗಳು ಒಂದು ಸ್ಮರಣೀಯ ದಾಖಲೆಗಳಾಗಿ ಉಳಿದಿವೆ. ಭಾರತದಲ್ಲಿ ಇರುವ ಸ್ಕೌಟ್ಸ್ ಮತ್ತು ಗೈಡ್ಸ್ ಶಿಬಿರ ನಿವೇಶನಗಳಲ್ಲಿ ಕರ್ನಾಟಕದ ಬೆಸೆಂಟ್ ಪಾರ್ಕ್ ಮತ್ತು ಕೊಂಡಜ್ಜಿ ಶಿಬಿರ ಕೇಂದ್ರಗಳು ಅತ್ಯಂತ ಸುಸಜ್ಜಿತ ಕೇಂದ್ರಗಳೆಂದು ಹೆಸರು ಪಡೆದಿವೆ.

ಕರ್ನಾಟಕದಲ್ಲಿ ಈ ಚಳವಳಿಯ ಅರ್ಪಣಾ ಭಾವದ ನೇತಾರರೆಂದರೆ, ಮಿ. ಫ್ರಾಂಕ್ ಸಿ. ಇರ್ವಿನ್, ಕೆನಡಾ (1918-19) ಮತ್ತು ಸಂಜೀವ ಕಾಮತ್ (1920-22) ನಿರ್ದೇಶಕರಾಗಿ, ನ್ಯಾಯಮೂರ್ತಿ ಕೆ. ಶಂಕರನಾರಾಯಣ ರಾವ್ (1922-43), ಮೇಜರ್ ವೈ.ವಿ.ಕೆ. ಮೂರ್ತಿ (1943-49), ಪ್ರೊ. ಪಿ. ಶಿವಶಂಕರ್ (1949-53), ಮುಖ್ಯ ಸ್ಕೌಟ್ ಆಯುಕ್ತರಾಗಿ, ಶ್ರೀ ಜೆ.ಬಿ. ಮಲ್ಲಾರಾಧ್ಯ (1953-60), ಪ್ರೊ. ಪಿ. ಶಿವಶಂಕರ್ (1960-64), ಶ್ರೀ ಕೊಂಡಜ್ಜಿ ಬಸಪ್ಪ(1964-82), ಶ್ರೀ ವಿ.ಪಿ. ದೀನದಯಾಳು ನಾಯ್ಡು (1982-1993) ರಾಜ್ಯ ಮುಖ್ಯ ಆಯುಕ್ತರಾಗಿ ಸೇವೆ ಸಲ್ಲಿಸಿದರು. 1993ರಿಂದ ರಾಜ್ಯ ಮುಖ್ಯ ಆಯುಕ್ತರಾಗಿ ಮುಂದುವರೆದಿರುವ ಶ್ರೀ ಕೊಂಡಜ್ಜಿ ಬ. ಷಣ್ಮುಖಪ್ಪ ಇವರು ಕಾರ್ಯ ನಿರ್ವಹಿಸುತ್ತಿದ್ದಾರೆ.



## ಸ್ಕೌಟ್/ಗೈಡ್ ಎಂದರೆ...



### ಜೀವನ ಶಿಕ್ಷಣ

ಶಾಲೆ ಮತ್ತು ಮನೆ ಇವೆರಡೂ ಪೂರೈಸಲಾಗದ ಅಗತ್ಯಗಳನ್ನು ಪೂರೈಸಿರುವ ಸ್ಕೌಟ್ ಶಿಕ್ಷಣವು ಯುವಜನಾಂಗಕ್ಕೆ ಅವೆರಡಕ್ಕೂ ಪೂರಕವಾಗಿರುತ್ತದೆ. ಸ್ಕೌಟ್ ಸ್ವಂತ ಅರಿವನ್ನು ಪರಿಶೋಧಿಸುವ, ಪ್ರಕಾಶಿಸುವ ಮತ್ತು ಅರಿತುಕೊಳ್ಳುವ ಅಗತ್ಯವನ್ನು ವಿಕಾಸಗೊಳಿಸುತ್ತದೆ. ಸ್ಕೌಟ್‌ಗಳು/ಗೈಡ್‌ಗಳು ತರಗತಿಯ ಕೋಣೆಗಳನ್ನು ದಾಟಿ ಹೊಸದನ್ನು ಹುಡುಕುತ್ತಾರೆ. ಕಲಿಯಲು ಇರುವ ಪ್ರತಿಭೆಗಳು ಪ್ರಕಟವಾಗುವಂತೆ ಮಾಡಿ, ಇತರರಿಗೆ ಜ್ಞಾನವನ್ನು ಮುಟ್ಟಿಸುತ್ತಾರೆ.

### ಒಂದು ಯುವಜನ ಚಳವಳಿ

ಸ್ಕೌಟ್/ಗೈಡ್ ಇದು ಒಂದು ಚಳವಳಿ... ನಿರಂತರ ಚಳವಳಿ. ಸ್ಥಳೀಯ ಪರಿಸ್ಥಿತಿಗಳಿಗೆ ಅನುಗುಣವಾಗಿ ಎಲ್ಲ ಕಡೆಗಳಲ್ಲೂ ಅದು ಅರಳುತ್ತದೆ; ಹೊಂದಿಕೊಳ್ಳುತ್ತದೆ. ಸ್ಥಳೀಯ

ಅಗತ್ಯಗಳಿಗೆ ಅನುಗುಣವಾಗಿ ಎಲ್ಲ ಕಡೆಗಳಲ್ಲೂ ಸೇವೆ ಸಲ್ಲಿಸುತ್ತದೆ.



## ಅಂತಾರಾಷ್ಟ್ರೀಯ

ವಿಶ್ವದಲ್ಲಿ 216ಕ್ಕೂ ಹೆಚ್ಚು ರಾಷ್ಟ್ರಗಳಲ್ಲಿ ಮುನ್ನಣೆ ಪಡೆದ ಸ್ಕೌಟ್ ಸಂಸ್ಥೆಗಳು ಮತ್ತು ಅವುಗಳ ಶಾಖೆಗಳಿವೆ.



## ಬೆಳೆಯುತ್ತಿದೆ

1907ರಲ್ಲಿ ಆರಂಭವಾದಂದಿನಿಂದ ಸ್ಕೌಟ್‌ನ ಪ್ರಗತಿ ನಿಲ್ಲದೆ ಬೆಳೆಯುತ್ತಿದೆ. ಇಂದು 28 ದಶಲಕ್ಷಕ್ಕೂ ಹೆಚ್ಚು ಬಾಲಕ ಬಾಲಕಿಯರು ಅದರ ಸದಸ್ಯರಾಗಿದ್ದಾರೆ. ಕಳೆದ 20 ವರ್ಷಗಳಲ್ಲಿ ಸ್ಕೌಟ್ ಸದಸ್ಯತ್ವ ದ್ವಿಗುಣಗೊಂಡಿದೆ. ಹೆಚ್ಚಿನ ಬೆಳವಣಿಗೆ ಆಗಿರುವುದು ಅಭಿವೃದ್ಧಿಪರ ರಾಷ್ಟ್ರಗಳಲ್ಲಿ.

## ಎಲ್ಲರಿಗೂ ಮುಕ್ತ

ಸ್ಕೌಟ್‌ನ ಸ್ಥಾಪಕ ಲಾರ್ಡ್ ರಾಬರ್ಟ್ ಬೇಡನ್ ಪೊವೆಲ್‌ರು ರೂಪಿಸಿದ ಉದ್ದೇಶ, ತತ್ವಗಳು ಮತ್ತು ಮಾರ್ಗಗಳಿಗೆ ಅನುಗುಣವಾಗಿ ಎಲ್ಲರಿಗೂ ಮುಕ್ತವಾಗಿದೆ.

## ಉದ್ದೇಶಪೂರ್ಣ ವಿನೋದ

ಎಳೆಯ ವಯಸ್ಸಿನವರು ದೈಹಿಕವಾಗಿ, ಬೌದ್ಧಿಕವಾಗಿ, ಸಾಮಾಜಿಕವಾಗಿ ಮತ್ತು ಆಧ್ಯಾತ್ಮಿಕವಾಗಿ ವಿಕಾಸಗೊಳ್ಳಲು ನೆರವಾಗುವ ತನ್ನ ಉದ್ದೇಶವನ್ನು ಸ್ಕೌಟ್ ವಿನೋದ, ವಿಹಾರಗಳ ಮೂಲಕ ಸಾಧಿಸುತ್ತದೆ.

## ವಯಸ್ಕರಿಗೆ ಒಂದು ಸವಾಲು



ಯುವಜನಾಂಗಕ್ಕೆ ಒಂದು ಅವಕಾಶ. ತಲೆಮಾರುಗಳ ಮಧ್ಯೆ ತಿಳಿವಳಿಕೆಯನ್ನು ಉತ್ತಮಪಡಿಸಿಕೊಳ್ಳುವ ಒಂದು ಮಾರ್ಗ. ವಯಸ್ಕನಾಯಕರು ತಮ್ಮ ಸೇವೆಯಲ್ಲಿ ಮೌಲಿಕವಾದ ತರಬೇತಿ ಮತ್ತು ಅನುಭವ ಪಡೆಯುತ್ತಾರೆ. ಇದರಿಂದ ಅವರ ವೈಯಕ್ತಿಕ ವಿಕಾಸಕ್ಕೂ ಅನುಕೂಲವಾಗುತ್ತದೆ.

## ಸ್ವಪ್ರೇರಿತ

ಸ್ಕೌಟ್‌ಗಳು ಮತ್ತು ನಾಯಕರು ಸ್ಕೌಟಿಂಗ್/ಗೈಡಿಂಗ್ ಅನ್ನು ಸ್ವಯಂ ಇಚ್ಛೆಯಿಂದ ಆಯ್ಕೆ ಮಾಡಿಕೊಳ್ಳಬೇಕು.

## ರಾಜಕೀಯೇತರ



ಸ್ಕೌಟ್ ಗೈಡ್ ಚಳುವಳಿ ಯಾವುದೇ ರಾಜಕೀಯ ಪಕ್ಷ ಅಥವಾ ಸಂಸ್ಥೆಯನ್ನು ಪ್ರತಿನಿಧಿಸುವುದಿಲ್ಲ ; ಅಷ್ಟೇ ಅಲ್ಲ, ಪ್ರತಿನಿಧಿಸಕೂಡದು. ಸ್ಕೌಟ್‌ಗೈಡ್‌ಗಳು ತಮ್ಮ ಸಮುದಾಯಕ್ಕೆ, ಸಮಾಜಕ್ಕೆ ಮತ್ತು ದೇಶಕ್ಕೆ ರಚನಾತ್ಮಕ ಕೊಡುಗೆ ನೀಡುವಂತೆ ಅವರನ್ನು ಉತ್ತೇಜಿಸಲಾಗುತ್ತದೆ.

## ಒಂದು ವಿಧಾನ

## ವೈಯಕ್ತಿಕ ಬದ್ಧತೆ

* ಜೀವನದ ಒಂದು ಸರಳ ಸಂಹಿತೆ : ಸ್ಕೌಟ್/ಗೈಡ್ ಪ್ರತಿಜ್ಞೆ ಮತ್ತು ನಿಯಮ

## ಮಾಡುತ್ತಾ ಕಲಿಯುವುದು



* ಇತರರೊಡನೆ ಕ್ರಿಯಾಶೀಲ ಪಾಲುಗೊಳ್ಳುವಿಕೆ.

## ಸಣ್ಣತಂಡಗಳಲ್ಲಿ ಕೆಲಸ ಮಾಡುವುದು

* ನಾಯಕತ್ವ, ಗುಂಪು ಕುಶಲತೆ ಮತ್ತು ವೈಯಕ್ತಿಕ ಹೊಣೆಗಾರಿಕೆಯನ್ನು ಗಸ್ತುದಳದಲ್ಲಿ ಬೆಳೆಸುವುದು

## ಉತ್ತೇಜಕ ಕಾರ್ಯಕ್ರಮಗಳು

* ಯುವಜನರ ಆಸಕ್ತಿಯನ್ನು ಆಧರಿಸಿದ ಪ್ರಗತಿಪರ ಚಟುವಟಿಕೆಗಳು. ಸರಳತೆ, ಸೃಜನಶೀಲತೆ ಮತ್ತು ಪರಿಶೋಧಕತೆಗಳು ಒಟ್ಟುಗೂಡಿ, ಸಾಹಸ ಮತ್ತು ಸವಾಲುಗಳನ್ನು ಒಡಗಿಸುವ ಒಂದು ಸಮೃದ್ಧ ಕಲಿಕೆಯು, ಹಾಗೂ ನಿಸರ್ಗಕ್ಕೆ ಸಂಬಂಧಿಸಿದ ಚಟುವಟಿಕೆಗಳು.



## ಒಂದು ಜೀವನ ಸಂಹಿತೆ

**ಒಂದು ಆಧ್ಯಾತ್ಮಿಕ ಆಯಾಮ** - ಭೌತಿಕ ಜಗತ್ತನ್ನು ಮೀರಿದ ಜೀವನದ ಆಧ್ಯಾತ್ಮಿಕ ಮೌಲ್ಯವನ್ನು ಹುಡುಕುವ ಒಂದು ಬದ್ಧತೆ.



**ಒಂದು ಸಾಮಾಜಿಕ ಆಯಾಮ** - ಇತರರ ಘನತೆಯನ್ನು ಮತ್ತು ನಿಸರ್ಗ ಜಗತ್ತಿನ ಪೂರ್ಣತೆಯನ್ನು ಗೌರವಿಸುತ್ತ ಸಮಾಜದ ಪ್ರಗತಿಯಲ್ಲಿ ಪಾಲುಗೊಳ್ಳುವುದು. ಸ್ಥಳೀಯ, ರಾಷ್ಟ್ರೀಯ ಮತ್ತು ಅಂತಾರಾಷ್ಟ್ರೀಯ ಶಾಂತಿ ಸೌಹಾರ್ದತೆ ಮತ್ತು ಸಹಕಾರಗಳನ್ನು ಪ್ರವರ್ತಿಸುವುದು.

**ಒಂದು ವೈಯಕ್ತಿಕ ಆಯಾಮ**

ವೈಯಕ್ತಿಕ ಹೊಣೆಗಾರಿಕೆಯ ಒಂದು ಪ್ರಜ್ಞೆಯನ್ನು ಬೆಳೆಸುವುದು ಮತ್ತು ಜವಾಬ್ದಾರಿಯುತ ಸ್ವಯಂ ಅಭಿವ್ಯಕ್ತಿಯ ಅಪೇಕ್ಷೆಯನ್ನು ಉತ್ತೇಜಿಸುವುದು.

## ಸ್ಕೌಟ್ ಮತ್ತು ಗೈಡ್‌ಗಳ ಪಾತ್ರ

**ವಾಸ್ತವ ಅಗತ್ಯಗಳನ್ನು ಪೂರೈಸುವುದು** - ಸ್ಕೌಟ್ ಮತ್ತು ಗೈಡ್‌ಗಳು ತಾವಿರುವ ಸಮುದಾಯಗಳು ಎದುರಿಸುವ ಅನೇಕ ವಿಷಯಗಳಲ್ಲಿ ಪಾಲುಗೊಂಡಿರುತ್ತಾರೆ.

ಪರಸ್ಪರ ಗುರಿಸಾಧನೆಗಾಗಿ ಸ್ಕೌಟ್ ಮತ್ತು ಗೈಡ್‌ಗಳು ಸಮುದಾಯದಲ್ಲಿ ಇತರರೊಂದಿಗೆ ಕೆಲಸಮಾಡುತ್ತಾರೆ.

**ಸ್ಕೌಟ್ ಮತ್ತು ಗೈಡ್‌ಗಳು ತೊಡಗುವ ಚಟುವಟಿಕೆಗಳು :**



1. ಸ್ವಚ್ಛತಾ ಕಾರ್ಯಕ್ರಮ, 2. ಆರೋಗ್ಯ [ಪಲ್ಸ್‌ಪೋಲಿಯೊ ಹನಿ ನೀಡಿಕೆ ಕಾರ್ಯಕ್ರಮ, ಮೌಖಿಕ ಜಲೀಕರಣ ಚಿಕಿತ್ಸೆ - (ಓರಲ್ ರಿಹೈಡ್ರೇಶನ್ ಥೆರಪಿ ಇತ್ಯಾದಿ)], 3. ಸಾಕ್ಷರತೆ 4. ಸಸಿ ನೆಡುವುದು 5. ಪರಿಸರ ಸಂರಕ್ಷಣೆ 6. ಏಡ್ಸ್‌ರೋಗ ಜಾಗೃತಾ ಕಾರ್ಯಕ್ರಮ 7. ಕುಷ್ಠರೋಗ ನಿವಾರಣೆ 8. ಕುಡಿಯುವ ನೀರಿನ ಸಂರಕ್ಷಣೆ ಮತ್ತು ಜಾಗೃತಿ ಬಗ್ಗೆ ಪ್ರಚಾರ. 9. ಕುಟುಂಬ ಜೀವನ ಶಿಕ್ಷಣ 10. ಸಮುದಾಯ ಸೇವೆ 11. ನೇತ್ರ ಶಸ್ತ್ರಚಿಕಿತ್ಸಾ ಶಿಬಿರ 12. ರಕ್ತದಾನ ಶಿಬಿರ ಇತ್ಯಾದಿ.



# ಮೂಲಭೂತ ತತ್ವಗಳು

## (ಅ) ನಿರೂಪಣೆ :



ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ಸಂಸ್ಥೆಯು, ಯುವ-ಜನತೆಗಾಗಿರುವ, ಸ್ವಯಂಪ್ರೇರಿತವಾದ, ರಾಜಕೀಯವಲ್ಲದ, ಶೈಕ್ಷಣಿಕ ಚಳವಳಿಯಾಗಿದೆ. ಸ್ಥಾಪಕರಾದ ಲಾರ್ಡ್ ಬೇಡನ್ ಪೊವೆಲ್ಲರು ೧೯೦೭ರಲ್ಲಿ ಕಲ್ಪಿಸಿಕೊಂಡ ಉದ್ದೇಶ, ಸಿದ್ಧಾಂತ ಮತ್ತು ವಿಧಾನಗಳಿಗೆ ಅನುಗುಣವಾಗಿರುವ, ಯಾವುದೇ ಜನಾಂಗ ಅಥವಾ ಮತಗಳ ಭೇದವಿಲ್ಲದ, ಎಲ್ಲರಿಗೂ ಮುಕ್ತವಾಗಿರುವ ಸ್ವಯಂ ಸೇವಾ ಸಂಸ್ಥೆಯಾಗಿದೆ.

## (ಆ) ಉದ್ದೇಶ :

ವೈಯಕ್ತಿಕವಾಗಿ, ಜವಾಬ್ದಾರಿಯುತ ಪ್ರಜೆಗಳಾಗಿ, ಹಾಗೂ ಸ್ಥಳೀಯ, ರಾಷ್ಟ್ರೀಯ ಮತ್ತು ಅಂತಾರಾಷ್ಟ್ರೀಯ ಸಮುದಾಯದ ಸದಸ್ಯರಾಗಿ, ತಮ್ಮಲ್ಲಿ ಅಡಗಿರುವ ಶಾರೀರಿಕ, ಸಾಮಾಜಿಕ ಹಾಗೂ ಪಾರಮಾರ್ಥಿಕ ಚೈತನ್ಯಗಳನ್ನು ಪೂರ್ಣವಾಗಿ ಹೊಂದುವುದರಲ್ಲಿ ಯುವಜನತೆಯ ಬೆಳವಣಿಗೆಗೆ ಸಹಕರಿಸುವುದೇ ಚಳವಳಿಯ ಉದ್ದೇಶವಾಗಿದೆ.

## (ಇ) ಸಿದ್ಧಾಂತಗಳು :

ಸ್ಕೌಟ್/ಗೈಡ್ ಚಳವಳಿಯು ಈ ಕೆಳಕಂಡ ಸಿದ್ಧಾಂತಗಳ ಮೇಲೆ ಆಧಾರಿತವಾಗಿದೆ.



### ದೇವರಿಗೆ ಕರ್ತವ್ಯ :

ಪಾರಮಾರ್ಥಿಕ ತತ್ತ್ವಗಳ ಅವಲಂಬನೆ, ಆ ತತ್ತ್ವಗಳನ್ನು ನಿರೂಪಿಸುವ ಧರ್ಮಕ್ಕೆ ನಿಷ್ಠೆ, ಹಾಗೂ ಅದರಿಂದ ಉದ್ಭವಿಸಬಹುದಾದ ಕರ್ತವ್ಯಗಳನ್ನು ಅಂಗೀಕರಿಸುವುದು.

ಸೂಚನೆ : ಅಪೇಕ್ಷೆಪಟ್ಟರೆ ''ದೇವರು'' ಪದಕ್ಕೆ ಬದಲಾಗಿ ''ಧರ್ಮ'' ಪದವನ್ನು ಬಳಸಬಹುದು.

### ಇತರರಿಗೆ ಕರ್ತವ್ಯ :

ಸ್ಥಳೀಯ, ರಾಷ್ಟ್ರೀಯ ಹಾಗೂ ಅಂತಾರಾಷ್ಟ್ರೀಯ ಶಾಂತಿ, ಅರಿವು ಮತ್ತು ಸಹಕಾರಗಳ ಬೆಳವಣಿಗೆಯೊಂದಿಗೆ ಸಾಮರಸ್ಯ ಹೊಂದಿದ ರಾಷ್ಟ್ರನಿಷ್ಠೆ.

ತನ್ನ ಸಹಚರರ ಘನತೆಗೆ ಹಾಗೂ ಪ್ರಾಕೃತಿಕ ಪ್ರಪಂಚದ ಸಮಗ್ರತೆಗೆ ಮಾನ್ಯತೆ ಮತ್ತು ಗೌರವದೊಡನೆ ಸಮಾಜದ ಅಭಿವೃದ್ಧಿಯಲ್ಲಿ ಪಾತ್ರವಹಿಸುವಿಕೆ.

## ತನಗಾಗಿ ಕರ್ತವ್ಯ :

ವೈಯುಕ್ತಿಕ ವ್ಯಕ್ತಿತ್ವದ ಬೆಳವಣಿಗೆಯ ಜವಾಬ್ದಾರಿ.

## ವಿಧಾನ :

ಈ ಕೆಳಗಿನ ಅಂಶಗಳ ಮೂಲಕ ಪ್ರಗತಿಪರ ಸ್ವಶಿಕ್ಷಣದ ಕ್ರಮವೇ ಸ್ಕೌಟ್- ಗೈಡ್ ವಿಧಾನವಾಗಿದೆ.



- ಪ್ರತಿಜ್ಞೆ ಮತ್ತು ನಿಯಮ

- ಮಾಡುವಿಕೆಯಿಂದ ಕಲಿಯುವಿಕೆ

- ವಯಸ್ಕ ನಾಯಕತ್ವದಲ್ಲಿ ಪ್ರಗತಿಪರ ಆವಿಷ್ಕಾರವನ್ನು ಒಳಗೊಂಡ ಸಣ್ಣ ಗುಂಪುಗಳ ಸದಸ್ಯತ್ವ ಮತ್ತು ಉತ್ತೇಜಕ ಕಾರ್ಯಕ್ರಮಗಳು

- ಪ್ರಕೃತಿಯೊಂದಿಗೆ ಸಂಪರ್ಕ ಹೊಂದಿದ ಹೊರಾವರಣದಲ್ಲಿಯೇ ಹೆಚ್ಚಾಗಿ ನಡೆಸುವ ಆಟಗಳು. ಉಪಯುಕ್ತ ಕೌಶಲ್ಯಗಳು ಮತ್ತು ಸಮುದಾಯ ಸೇವೆಗಳನ್ನು ಒಳಗೊಂಡಿರುವ, ಭಾಗಿಯಾಗಿರುವವರ ಆಸಕ್ತಿಗಳನ್ನು ಆಧರಿಸಿದ ವಿವಿಧ ಚಟುವಟಿಕೆಗಳ ಪ್ರಗತಿಪರ ಹಾಗೂ ಉತ್ತೇಜಕ ಕಾರ್ಯಕ್ರಮಗಳು.



## ಪ್ರತಿಜ್ಞೆ :

### ಅ. ಸ್ಕೌಟ್ ಮತ್ತು ರೋವರ್‌ಗಳಿಗಾಗಿ ಪ್ರತಿಜ್ಞೆ ಇಂತಿದೆ :

"ದೇವರಿಗೆ ಮತ್ತು ನನ್ನ ದೇಶಕ್ಕೆ ನನ್ನ ಕರ್ತವ್ಯ ಮಾಡಲು, ಇತರರಿಗೆ ಸಹಾಯ ಮಾಡಲು, ಸ್ಕೌಟ್ ನಿಯಮವನ್ನು ಪಾಲಿಸಲು ನನ್ನ ಕೈಲಾದಮಟ್ಟಿಗೆ ಪ್ರಯತ್ನಮಾಡುತ್ತೇನೆಂದು ನನ್ನ ಆತ್ಮಸಾಕ್ಷಿಯಾಗಿ ಪ್ರತಿಜ್ಞೆಮಾಡುತ್ತೇನೆ."

### ಆ. ಗೈಡ್ ಮತ್ತು ರೇಂಜರ್‌ಗಳಿಗಾಗಿ ಪ್ರತಿಜ್ಞೆ ಇಂತಿದೆ :

"ದೇವರಿಗೆ ಮತ್ತು ನನ್ನ ದೇಶಕ್ಕೆ ನನ್ನ ಕರ್ತವ್ಯ ಮಾಡಲು, ಇತರರಿಗೆ ಸಹಾಯ ಮಾಡಲು ಹಾಗೂ ಗೈಡ್ ನಿಯಮವನ್ನು ಪಾಲಿಸಲು ನನ್ನ ಕೈಲಾದ ಮಟ್ಟಿಗೆ ಪ್ರಯತ್ನಮಾಡುತ್ತೇನೆಂದು ನನ್ನ ಆತ್ಮಸಾಕ್ಷಿಯಾಗಿ ಪ್ರತಿಜ್ಞೆಮಾಡುತ್ತೇನೆ."



### ಇ. ಮರಿಗಳಿಗಾಗಿ ಪ್ರತಿಜ್ಞೆ ಹೀಗಿದೆ :

"ನಾನು ನನ್ನ ಕೈಲಾದ ಮಟ್ಟಿಗೆ ದೇವರಿಗೆ ಮತ್ತು ನನ್ನ ದೇಶಕ್ಕೆ ನನ್ನ ಕರ್ತವ್ಯಮಾಡಲು ಮರಿಗಳ ನಿಯಮವನ್ನು ಪಾಲಿಸಲು ಮತ್ತು ಪ್ರತಿದಿನವೂ ಒಂದು ಉಪಕಾರವನ್ನು ಮಾಡಲು ಪ್ರಯತ್ನಮಾಡುತ್ತೇನೆ ಎಂದು ಪ್ರತಿಜ್ಞೆಮಾಡುತ್ತೇನೆ."



### ಈ) ಬುಲ್‌ಬುಲ್‌ಗಳಿಗಾಗಿ ಪ್ರತಿಜ್ಞೆ ಹೀಗಿದೆ :

"ನಾನು ನನ್ನ ಕೈಲಾದ ಮಟ್ಟಿಗೆ ದೇವರಿಗೆ ಮತ್ತು ನನ್ನ ದೇಶಕ್ಕೆ ನನ್ನ ಕರ್ತವ್ಯ ಮಾಡಲು, ಬುಲ್‌ಬುಲ್ ನಿಯಮವನ್ನು ಪಾಲಿಸಲು ಮತ್ತು ಪ್ರತಿದಿನವೂ ಒಂದು ಉಪಕಾರವನ್ನು ಮಾಡಲು ಪ್ರಯತ್ನಿಸುತ್ತೇನೆ ಎಂದು ಪ್ರತಿಜ್ಞೆಮಾಡುತ್ತೇನೆ."

**ಸೂಚನೆ :**

೧. ಅಪೇಕ್ಷೆ ಇದ್ದರೆ 'ದೇವರು' ಬದಲಾಗಿ 'ಧರ್ಮ' ಪದವನ್ನೂ ಬಳಸಬಹುದು

೨. ದೀಕ್ಷೆಯ ಸಂದರ್ಭದಲ್ಲಿ ಪ್ರತಿಜ್ಞೆ ಕೈಗೊಳ್ಳಬೇಕು ಮತ್ತು ಈ ಮೊದಲೇ ಸ್ಕೌಟ್ ಅಥವಾ ಗೈಡ್ ಆಗಿರುವ ರೋವರ್ ಅಥವಾ ರೇಂಜರ್‌ಗಳ ವಿಷಯದಲ್ಲಿ ಪ್ರತಿಜ್ಞೆಯನ್ನು ಪುನರ್ ದೃಢೀಕರಿಸಬೇಕು.

**ನಿಯಮ:**



**ಅ. ಸ್ಕೌಟ್ ಮತ್ತು ರೋವರ್ ನಿಯಮ :**

೧. ಸ್ಕೌಟ್ ವಿಶ್ವಾಸಾರ್ಹನು.

೨. ಸ್ಕೌಟ್ ನಿಷ್ಠಾವಂತನು.

೩. ಸ್ಕೌಟ್ ಎಲ್ಲರಿಗೂ ಸ್ನೇಹಿತನು ಮತ್ತು ಇತರ ಸ್ಕೌಟಿನ ಸೋದರನು.

೪. ಸ್ಕೌಟ್ ವಿನಯಶೀಲನು.

೫. ಸ್ಕೌಟ್ ಪ್ರಾಣಿಗಳ ಸ್ನೇಹಿತನು ಮತ್ತು ಪ್ರಕೃತಿ ಪ್ರೇಮಿಯು.

೬. ಸ್ಕೌಟ್ ಶಿಸ್ತುಳ್ಳವನು ಮತ್ತು ಸಾರ್ವಜನಿಕ ಆಸ್ತಿಯ ರಕ್ಷಿಸಲು ನೆರವಾಗುವನು.

೭. ಸ್ಕೌಟ್ ಧೈರ್ಯಶಾಲಿಯು.

೮. ಸ್ಕೌಟ್ ಮಿತವ್ಯಯಿ.

೯. ಸ್ಕೌಟ್ ಕಾಯಾ, ವಾಚಾ, ಮನಸಾ ಪರಿಶುದ್ಧನು.

**ಆ. ಗೈಡ್ ಮತ್ತು ರೇಂಜರ್ ನಿಯಮ :**



೧. ಗೈಡ್ ವಿಶ್ವಾಸಾರ್ಹಳು

೨. ಗೈಡ್ ನಿಷ್ಠಾವಂತಳು

೩. ಗೈಡ್ ಎಲ್ಲರಿಗೂ ಸ್ನೇಹಿತಳು ಮತ್ತು ಪ್ರತಿಯೊಬ್ಬ ಗೈಡಳ ಸೋದರಿಯು

೪. ಗೈಡ್ ವಿನಯಶೀಲಳು

೫. ಗೈಡ್ ಪ್ರಾಣಿಗಳ ಸ್ನೇಹಿತಳು ಮತ್ತು ಪ್ರಕೃತಿ ಪ್ರೇಮಿಯು.

೬. ಗೈಡ್ ಶಿಸ್ತುಳ್ಳವಳು ಮತ್ತು ಸಾರ್ವಜನಿಕ ಆಸ್ತಿ ರಕ್ಷಿಸಲು ನೆರವಾಗುವಳು.

೭. ಗೈಡ್ ಧೈರ್ಯಶಾಲಿಯು

೮. ಗೈಡ್ ವಿತವ್ಯಯಿ

೯. ಗೈಡ್ ಕಾಯಾ, ವಾಚಾ, ಮನಸಾ ಪರಿಶುದ್ಧಳು.




**ಇ. ಮರಿ ನಿಯಮ :**

೧. ಮರಿಯು ಹಿರಿಯರಿಗೆ ವಿಧೇಯನು

೨. ಮರಿಯು ವಿನಯಿ ಮತ್ತು ನಿರ್ಮಲನು

**ಈ. ಬುಲ್‌ಬುಲ್ ನಿಯಮ :**



೧. ಬುಲ್ ಬುಲ್ ಹಿರಿಯರಿಗೆ ವಿಧೇಯಳು

೨. ಬುಲ್‌ಬುಲ್ ವಿನಯಿ ಮತ್ತು ನಿರ್ಮಲಳು.

# ಸಹಭಾಗಿತ್ವದ ನಾಲ್ಕು ಬಂಧಗಳು

## ಧ್ಯೇಯ ಸೂತ್ರ

"ಸಿದ್ಧವಾಗಿರು " ಎನ್ನುವುದು ಸ್ಕೌಟ್ ಮತ್ತು ಗೈಡ್‌ನ ಧ್ಯೇಯ ಸೂತ್ರ, ಮತ್ತು ಅದು ಚಳವಳಿಯ ಎಲ್ಲ ಸದಸ್ಯರಿಗೂ ಅನ್ವಯವಾಗುತ್ತದೆ.

## ವಂದನೆ



ಸ್ಕೌಟ್ ಮತ್ತು ಗೈಡ್ ಪ್ರತಿಜ್ಞೆಯ ಮೂರು ಭಾಗಗಳ ನೆನಪಿಗಾಗಿ ಬಲಗೈನ ಮೂರು ಬೆರಳುಗಳನ್ನು ಮೇಲಕ್ಕೆ ಎತ್ತಿ ವಂದಿಸುವುದು. ತೋರು ಬೆರಳು ಬಲಹುಬ್ಬಿನ ಮೇಲೆ ಇರಬೇಕು. ಚಳವಳಿಯ ಎಲ್ಲ ಸದಸ್ಯರೂ ಇದನ್ನು ಅನುಸರಿಸಬೇಕು.

## ಸಂಕೇತ



ಸಂಕೇತವು ವಂದನೆಯಂತೆಯೇ ಇರುತ್ತದೆ. ತೋಳಿನ ಮಟ್ಟಕ್ಕೆ ಸಮವಾಗಿ ಲಂಬರೂಪದಲ್ಲಿ ಬಲಗೈ ಇರಬೇಕು. ಇದನ್ನು ಸ್ಕೌಟ್ ಮತ್ತು ಗೈಡ್ ಚಳವಳಿಯ ಎಲ್ಲ ಸದಸ್ಯರೂ ಪ್ರತಿಜ್ಞೆ ಕೈಗೊಳ್ಳುವಾಗ ಅಥವಾ ನವೀಕರಿಸುವಾಗ ಅನುಸರಿಸಬೇಕು. ಬೇರಾವ ಸಂದರ್ಭದಲ್ಲೂ ಇದನ್ನು ಬಳಸಬಾರದು.

## ಎಡಗೈ ಕುಲುಕುವುದು



ಸ್ಕೌಟ್ ಮತ್ತು ಗೈಡ್‌ಗಳು ಪರಸ್ಪರ ಎಡಗೈ ಕುಲುಕುವುದು ಅವರಲ್ಲಿ ಪರಸ್ಪರ ಇರುವ ವಿಶೇಷದ ಅಭಿವ್ಯಕ್ತಿಯಾಗಿದೆ. ಇದು ಚಳವಳಿಯ ಸದಸ್ಯರೆಲ್ಲ ಪರಸ್ಪರ ಸ್ನೇಹದ ಅಭಿವಂದನೆಯಲ್ಲಿ ವಿಶ್ವದಾದ್ಯಂತ ಅನುಸರಿಸುತ್ತಿರುವ ಸ್ಥಾಪಿತ ಪದ್ಧತಿ.

## ಸ್ಕೌಟಿಂಗ್ ಮತ್ತು ಗೈಡಿಂಗ್‌ನ ನಾಲ್ಕು ಸ್ತಂಭಗಳು



# ವಿವಿಧ ವಿಭಾಗಗಳು ಮತ್ತು ಬಾಲಕ-ಬಾಲಕಿಯರ ಕಾರ್ಯಕ್ರಮದ ಮುನ್ನಡೆ

ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್‌ನ ಉದ್ದೇಶ ಸಾಧನೆಗಾಗಿ ನಾವು ಪ್ರಗತಿಪರ ತರಬೇತಿ ನೀಡುತ್ತೇವೆ.

**ಕಬ್ಸ್ ಮತ್ತು ಬುಲ್‌ಬುಲ್ಸ್ (5 ರಿಂದ 10 ವರ್ಷದ ಬಾಲಕ-ಬಾಲಕಿಯರು):** ಪ್ರವೇಶದಿಂದ ಚತುರ್ಥ ಚರಣ್‌ವರೆಗೆ ಮತ್ತು ಪ್ರವೇಶದಿಂದ ಹೀರಕ್ ಪಂಖ್‌ದವರೆಗೆ. ಈ ತರಬೇತಿಗೆ ಒಂದು ದಳದಲ್ಲಿ ಸೂಕ್ತ ಸಂಖ್ಯೆ -೨೪. ಸಾಮಾನ್ಯವಾಗಿ ೬ ಮಕ್ಕಳ ಗುಂಪುಗಳ ಆಧಾರದ ಮೇಲೆ ಈ ತರಬೇತಿ ನಡೆಯುತ್ತದೆ. ಪ್ರತಿ ಗುಂಪಿಗೂ ಓರ್ವ ನಾಯಕ/ನಾಯಕಿ ಮತ್ತು ಸಹಾಯಕರಿರುತ್ತಾರೆ. ಸಣ್ಣ ಗುಂಪುಗಳಲ್ಲಿ ಕೆಲಸ ಮಾಡಲು ಮತ್ತು ನಾಯಕತ್ವ ವಹಿಸಲು ಇದು ನೆರವಾಗುತ್ತದೆ. ವಯಸ್ಕ ನಾಯಕ/ನಾಯಕಿಯನ್ನು ಕಬ್ ಮಾಸ್ಟರ್ / ಫ್ಲಾಕ್ ಲೀಡರ್ ಎಂದು ಕರೆಯಲಾಗುತ್ತದೆ.

**ಧ್ಯೇಯ ಸೂತ್ರ** : ಕೈಲಾದಷ್ಟು ಸಾಧಿಸಿ.

**ಸ್ಕೌಟ್ಸ್ ಮತ್ತು ಗೈಡ್ಸ್ (10 ರಿಂದ 17 ವರ್ಷದ ಬಾಲಕಿ-ಬಾಲಕಿಯರು):** ಪ್ರವೇಶದಿಂದ ರಾಜ್ಯ ಪುರಸ್ಕಾರ್ ಮತ್ತು ರಾಷ್ಟ್ರಪತಿ ಪ್ರಶಸ್ತಿಯವರೆಗೆ. ಸೂಕ್ತವಾದ ಸಂಖ್ಯೆ ೩೨. ಈ ಗುಂಪಿನಲ್ಲಿ ೮ ಜನ ಸ್ಕೌಟ್/ಗೈಡ್‌ಗಳ ತಂಡಗಳಿರುತ್ತವೆ. ಪ್ರತಿಯೊಂದು ತಂಡಕ್ಕೆ ಒಬ್ಬರು ನಾಯಕರು ಮತ್ತು ಸಹಾಯಕ ನಾಯಕರಿರುತ್ತಾರೆ. ಇಲ್ಲಿ ಕಾವಲು ಕರ್ತವ್ಯವೇ ಪ್ರಧಾನ ಚಟುವಟಿಕೆ. ತನ್ನ ತಂಡಕ್ಕೆ ನಾಯಕತ್ವ ಮತ್ತು ತರಬೇತಿ ಒದಗಿಸುವಲ್ಲಿ ತಂಡದ ಮುಖಂಡನಿಗೆ ಸಾಕಷ್ಟು ಜವಾಬ್ದಾರಿ ಇರುತ್ತದೆ. ವಯಸ್ಕ ನಾಯಕರಿಗೆ ಸ್ಕೌಟ್ ಮಾಸ್ಟರ್/ಗೈಡ್ ಕ್ಯಾಪ್ಟನ್ ಎಂದು ಕರೆಯಲಾಗುತ್ತದೆ.

**ಧ್ಯೇಯ ಸೂತ್ರ** : ಸಿದ್ಧವಾಗಿರು.

**ರೋವರ್ಸ್ ಮತ್ತು ರೇಂಜರ್ಸ್ (16 ರಿಂದ 25 ವರ್ಷದ ಯುವಕ-ಯುವತಿಯರು):** ಪ್ರವೇಶದ ಹಂತದಿಂದ ನಿಪುಣ್ ಹಂತದವರೆಗೆ ಮತ್ತು ರಾಷ್ಟ್ರಪತಿ ರೇಂಜರ್ / ರೋವರ್ ಪ್ರಶಸ್ತಿಯವರೆಗೆ. ಒಂದು ದಳದಲ್ಲಿ ಸೂಕ್ತ ಸಂಖ್ಯೆ ೧೨ ರಿಂದ ೨೦. ಈ ವಿಭಾಗದಲ್ಲಿ ಮುಖ್ಯವಾಗಿ ಸ್ವಯಂ ಕಾರ್ಯಕ್ರಮ ಯೋಜನೆ ಮತ್ತು ಸ್ವಯಂ ಆಡಳಿತವಿರುತ್ತದೆ. ವಯಸ್ಕ ನಾಯಕ/ನಾಯಕಿಗೆ ರೋವರ್ ಲೀಡರ್/ರೇಂಜರ್ ಲೀಡರ್ ಎಂದು ಕರೆಯಲಾಗುತ್ತದೆ.

**ಧ್ಯೇಯ ಸೂತ್ರ** : ಸೇವೆ.

# ರಾಜ್ಯ ಮತ್ತು ರಾಷ್ಟ್ರ ಪ್ರಶಸ್ತಿಗಳು


ಕಬ್‌ಗಳಿಗೆ ಚತುರ್ಥ ಚರಣ್ ಪ್ರಶಸ್ತಿ



ಬುಲ್‌ಬುಲ್‌ಗಳಿಗೆ ಹೀರಕ್ ಪಂಖ್ ಪ್ರಶಸ್ತಿ



ರೋವರ್ ಮತ್ತು ರೇಂಜರ್‌ಗಳಿಗೆ
ನಿಪುಣ್ ಪ್ರಶಸ್ತಿ



ಸ್ಕೌಟ್ ಮತ್ತು ಗೈಡ್‌ಗಳಿಗೆ
ರಾಜ್ಯ ಪುರಸ್ಕಾರ ಪ್ರಶಸ್ತಿ





ಸ್ಕೌಟ್ ಮತ್ತು ಗೈಡ್‌ಗಳಿಗೆ ರಾಷ್ಟ್ರಪತಿ ಪ್ರಶಸ್ತಿ





ರೋವರ್ ಮತ್ತು ರೇಂಜರ್‌ಗಳಿಗೆ ರಾಷ್ಟ್ರಪತಿ ಪ್ರಶಸ್ತಿ


ರೋವರ್ ಮತ್ತು ರೇಂಜರ್
ಘಟಕಗಳಿಗೆ ಸಮುದಾಯ ಸೇವೆಯ
ಉಪರಾಷ್ಟ್ರಪತಿ ಪ್ರಶಸ್ತಿ


ಸ್ಕೌಟ್/ಗೈಡ್ ಘಟಕಗಳ ಸ್ಪರ್ಧೆಯ
ಪ್ರಧಾನ ಮಂತ್ರಿಗಳ ಪಾರಿತೋಷಕ

# ಕರ್ನಾಟಕದಲ್ಲಿರುವ ರಾಜ್ಯ ತರಬೇತಿ ಕೇಂದ್ರಗಳು

## 1. ಬೆಸೆಂಟ್ ಪಾರ್ಕ್ ತರಬೇತಿ ಕೇಂದ್ರ

ರಾಜಧಾನಿ ಬೆಂಗಳೂರಿನಿಂದ ೪೦ ಕಿ.ಮೀ ದೂರದಲ್ಲಿ ದೊಡ್ಡಬಳ್ಳಾಪುರದ ಬಳಿ ತರಬೇತಿ ಕೇಂದ್ರವಿದೆ. ೧೦೦ ಎಕರೆಗಳಷ್ಟು ವಿಸ್ತಾರದಲ್ಲಿರುವ ಈ ಕೇಂದ್ರದಲ್ಲಿ ನಾನಾ ವಿಧದ ತರಬೇತಿ ಚಟುವಟಿಕೆಗಳನ್ನು ನಡೆಸಲು ಅಗತ್ಯವಾದ ಎಲ್ಲ ಮೂಲ ಸೌಲಭ್ಯಗಳನ್ನು ಕಲ್ಪಿಸಲಾಗಿದೆ.

*ರಾಜ್ಯ ತರಬೇತಿ ಕೇಂದ್ರ, ಬೆಸೆಂಟ್‌ಪಾರ್ಕ್, ದೊಡ್ಡಬಳ್ಳಾಪುರ ತಾಲ್ಲೂಕು,*
*ಬೆಂಗಳೂರು ಗ್ರಾಮಾಂತರ ಜಿಲ್ಲೆ, ದೂರವಾಣಿ : 080 - 7622093*

## 2. ಕೊಂಡಜ್ಜಿ ಬಸಪ್ಪ ಸ್ಕೌಟ್ಸ್ ಮತ್ತು ಗೈಡ್ಸ್ ತರಬೇತಿ ಕೇಂದ್ರ

ತರಬೇತಿ ಕೇಂದ್ರವು ದಾವಣಗೆರೆ ಜಿಲ್ಲೆ ಹರಿಹರ ತಾಲ್ಲೂಕಿನ ಕೊಂಡಜ್ಜಿ ಗ್ರಾಮದ ಬಳಿ ಇದೆ. ಸುಮಾರು ೮೦ ಎಕರೆ ಪ್ರದೇಶದ ಈ ಕೇಂದ್ರದಲ್ಲಿ ಜಲ ಚಟುವಟಿಕೆಗಳೂ ಸೇರಿದಂತೆ ಎಲ್ಲ ರೀತಿಯ ತರಬೇತಿಗೂ ಮೂಲ ಸೌಲಭ್ಯಗಳಿವೆ. ಈ ತರಬೇತಿ ಕೇಂದ್ರವು ಬೆಂಗಳೂರಿನಿಂದ ೨೭೩ ಕಿ.ಮೀ. ಮತ್ತು ದಾವಣಗೆರೆಯಿಂದ ೧೩ ಕಿ.ಮೀ ದೂರದಲ್ಲಿದೆ.

*ಕೊಂಡಜ್ಜಿ ಬಸಪ್ಪ ಸ್ಕೌಟ್ಸ್ ಮತ್ತು ಗೈಡ್ಸ್ ತರಬೇತಿ ಕೇಂದ್ರ, ಕೊಂಡಜ್ಜಿ,*
*ಹರಿಹರ ತಾಲ್ಲೂಕು, ದಾವಣಗೆರೆ ಜಿಲ್ಲೆ, ದೂರವಾಣಿ : 08192 - 281821*

## 3. ಶಾಂತಿಗೃಹ ತರಬೇತಿ ಕೇಂದ್ರ

ರಾಜ್ಯದ ರಾಜಧಾನಿ ಬೆಂಗಳೂರಿನ ಅರಮನೆಯ ರಸ್ತೆಯಲ್ಲಿರುವ (ಮಹಾರಾಣಿ ವಿಜ್ಞಾನ ಕಾಲೇಜಿಗೆ ಹೊಂದಿಕೊಂಡಂತೆ) ಈ ಕೇಂದ್ರದ ವಿಸ್ತಾರ ೨.೫೯ ಎಕರೆಗಳು. ತರಬೇತಿಗೆ ಅಗತ್ಯವಾದ ಎಲ್ಲ ಮೂಲಭೂತ ಸೌಲಭ್ಯಗಳು ಇಲ್ಲಿವೆ. ಗೈಡ್ ವಿಭಾಗದ ಕಾರ್ಯಾಲಯವೂ ಈ ಆವರಣದಲ್ಲೇ ಇದೆ.

*ಶಾಂತಿಗೃಹ ತರಬೇತಿ ಕೇಂದ್ರ, ನಂ. 39, ಅರಮನೆ ರಸ್ತೆ, ಬೆಂಗಳೂರು-560 001*
*ದೂರವಾಣಿ : 080 - 2267470*



# ವಯಸ್ಕ ನಾಯಕರಿಗೆ ನೀಡುವ ಪ್ರಗತಿಪರ ತರಬೇತಿಗಳ ವಿವರ

| ತರಬೇತಿಯ ವಿವರಗಳು | ಅವಧಿ | |
|---|---|---|
| | ಸ್ಕೌಟ್ ವಿಭಾಗ | ಗೈಡ್ ವಿಭಾಗ |
| ಮೂಲ ತರಬೇತಿ | (ನಿರಂತರ) 10 ದಿನಗಳು (ಐದೈದು ದಿನಗಳ ಎರಡು ಹಂತಗಳು) | 7 ದಿನಗಳು |
| ಮುಂದುವರೆದ ತರಬೇತಿ | 8 ದಿನಗಳು | 7 ದಿನಗಳು |
| ಹಿಮಾಲಯ ವುಡ್‌ಬ್ಯಾಡ್ಜ್ ತರಬೇತಿ | 10 ದಿನಗಳು | 7 ದಿನಗಳು |
| ಸಹಾಯಕ ನಾಯಕ ತರಬೇತುದಾರರ ಪೂರ್ವ ತರಬೇತಿ | 5 ದಿನಗಳು | 5 ದಿನಗಳು |
| ಸಹಾಯಕ ನಾಯಕ ತರಬೇತುದಾರರ ತರಬೇತಿ | 7 ದಿನಗಳು | 7 ದಿನಗಳು |
| ನಾಯಕ ತರಬೇತುದಾರರ ತರಬೇತಿ | 7 ದಿನಗಳು | 7 ದಿನಗಳು |
| ಆಯುಕ್ತರ ಮೂಲ ತರಬೇತಿ | 5 ದಿನಗಳು | 5 ದಿನಗಳು |
| ಆಯುಕ್ತರ ಮುಂದುವರೆದ ತರಬೇತಿ | 5 ದಿನಗಳು | 5 ದಿನಗಳು |



# ಪೋಷಕರಿಗೆ ಸಂದೇಶ

## ನಿಮ್ಮ ಹುಡುಗ/ಹುಡುಗಿ ಸ್ಕೌಟ್/ಗೈಡ್ ಆಗಬೇಕು. ಏಕೆಂದರೆ,



1. ಸ್ಕೌಟ್/ಗೈಡ್ ಶಿಕ್ಷಣವು - ನಿಮ್ಮ ಹುಡುಗ/ಹುಡುಗಿಯ ಬಿಡುವಿನ ಸಮಯವನ್ನು ಹಿತಕರ ಸಹಪಾಠಿಗಳೊಂದಿಗೆ ಆರೋಗ್ಯಕರ ಚಟುವಟಿಕೆಗಳಲ್ಲಿ ತೊಡಗಿಸುವಂತೆ ಮಾಡುತ್ತದೆ.
2. ಸ್ಕೌಟ್/ಗೈಡ್ ಶಿಕ್ಷಣವು - ಹುಡುಗ/ಹುಡುಗಿಯರ ಯಶಸ್ಸಿಗೆ ಅಗತ್ಯವಾದ ನೈತಿಕ ಬಲವನ್ನು ನೀಡುವುದಲ್ಲದೆ ಅವರ ಯಾವುದೇ ವೃತ್ತಿಯಲ್ಲಿ ಯಶಸ್ಸನ್ನು ಕೊಡುವುದು.
3. ಸ್ಕೌಟ್/ಗೈಡ್- ಇದು ಸೈನಿಕ ಚಳವಳಿಯಲ್ಲ. ನಾವು ಒಳ್ಳೆಯ ನಾಗರಿಕ ವ್ಯಕ್ತಿಗಳನ್ನು ರೂಪಿಸಹೊರಟಿದ್ದೇವೆಯೇ ವಿನಃ ಅನುಕರಣೆಯ ಸಿಪಾಯಿಗಳ ಒಂದು ತಂಡವನ್ನಲ್ಲ.
4. ಸ್ಕೌಟ್/ಗೈಡ್ - ನಿಮ್ಮ ಹುಡುಗ/ಹುಡುಗಿಗೆ ಸೇವಾವಕಾಶಗಳನ್ನು ಕಲ್ಪಿಸಿಕೊಡುತ್ತದೆ. ದೇವರು ಮತ್ತು ನೆರೆಯವರಲ್ಲಿ ಗೌರವ ಭಾವನೆ ಇರುವುದು ಧರ್ಮದ ಮೂಲ ಎಂದು ತಿಳಿಸುತ್ತದೆ.
5. ಸ್ಕೌಟ್/ಗೈಡ್ - ನಿಮ್ಮ ಹುಡುಗ/ಹುಡುಗಿಯನ್ನು ಕುಶಲರನ್ನಾಗಿ ಮಾಡುತ್ತದೆ. ಅವರ ಹವ್ಯಾಸಗಳು ಮನೆಗೆ ಉಪಯುಕ್ತವಾಗುವಂತೆಯೇ ಅವರಿಗೂ ಆಸಕ್ತಿಯ ವಿಷಯಗಳಾಗುತ್ತವೆ.
6. ಸ್ಕೌಟ್/ಗೈಡ್ - ನಿಮ್ಮ ಹುಡುಗ/ಹುಡುಗಿಯಲ್ಲಿ ಒಂದು ಗೌರವ ಮತ್ತು ನಿಷ್ಠೆಯ ಭಾವನೆಯನ್ನು ಬೆಳೆಸುತ್ತದೆ. ಅವರು ನಿಮ್ಮನ್ನು ನಿರಾಸೆಗೊಳಿಸುವುದಿಲ್ಲ ಅಥವಾ ನಿಮಗೆ ಸುಳ್ಳು ಹೇಳುವುದಿಲ್ಲ.
7. ಸ್ಕೌಟ್/ಗೈಡ್ - ನಿಮ್ಮ ಹುಡುಗ/ಹುಡುಗಿಗೆ ಸ್ವಾವಲಂಬನೆಯನ್ನು ಕಲಿಸುತ್ತದೆ. ಇದರಿಂದ ಅವರು ತಮಗೆ ತಾವೇ ರಕ್ಷಣೆ ಪಡೆದು ಇತರರಿಗೂ ನೆರವಾಗಬಲ್ಲರು.
8. ಸ್ಕೌಟ್/ಗೈಡ್ - ನಿಮ್ಮ ಹುಡುಗ/ಹುಡುಗಿಗೆ ಆರೋಗ್ಯ ತಂದುಕೊಡುತ್ತದೆ. ಬಯಲ ವ್ಯಾಯಾಮ ಮತ್ತು ಆತ್ಮರಕ್ಷಣೆ ಮೂಲಕ ಅವರು ಸದೃಢ ದೇಹ ಮತ್ತು ಸದೃಢ ಮನಸ್ಸನ್ನು ಗಳಿಸುತ್ತಾರೆ.
9. ಸ್ಕೌಟ್/ಗೈಡ್ -ನಿಮ್ಮ ಹುಡುಗ/ಹುಡುಗಿಯ ಸಹಜ ಪ್ರತಿಭೆಯನ್ನು ಗುರುತಿಸುತ್ತದೆ. ಮತ್ತು ಆ ಮೂಲಕ ಅವರು ಉದ್ಯೋಗದ ಆಯ್ಕೆಯಲ್ಲಿ ಸೂಕ್ತವಾದುದನ್ನು ಆರಿಸಿಕೊಳ್ಳಲು ನೆರವಾಗುತ್ತದೆ.
10. ಸ್ಕೌಟ್/ಗೈಡ್-ನಿಮ್ಮ ಹುಡುಗ/ಹುಡುಗಿಗೆ ಸಂತೋಷ ನೀಡುತ್ತದೆ. ಹರ್ಷೋತ್ಸಾಹಗಳ ಸಹವಾಸ ಮತ್ತು ನಿಸರ್ಗದ ಸುಖಾನುಭವದ ಮೂಲಕ ಅವರು ಖುಷಿಯಾಗಿರುತ್ತಾರೆ.
11. ಸ್ಕೌಟ್/ಗೈಡ್ - ನಿಮ್ಮ ಹುಡುಗ/ಹುಡುಗಿಯ ದೃಷ್ಟಿಕೋನವನ್ನು ವಿಶಾಲಗೊಳಿಸುತ್ತದೆ. ಹೇಗೆಂದರೆ ಪ್ರತಿಯೊಂದು ನಾಗರಿಕ ಸುಸಂಸ್ಕೃತ ದೇಶದಲ್ಲಿ ಇರುವ ಅದರ ಶಾಖೆಗಳು ಪರಸ್ಪರ ಸಂಬಂಧವಿಟ್ಟುಕೊಂಡಿವೆ.
12. ಸ್ಕೌಟ್/ಗೈಡ್ - ನಿಮ್ಮ ಹುಡುಗ/ಹುಡುಗಿಯನ್ನು ಯೋಗ್ಯ ವ್ಯಕ್ತಿಯನ್ನಾಗಿ ರೂಪಿಸುತ್ತದೆ. ಅವರು ನೀವು ಅಪೇಕ್ಷಿಸಿದಂತಹ ವ್ಯಕ್ತಿಗಳಾಗುತ್ತಾರೆ.



Baden Powell of Gilwell

**ಬೇಡನ್ ಪೊವೆಲ್**

# ಚಳವಳಿಯ ಬಗ್ಗೆ ವಿಶ್ವನಾಯಕರ ಚಿಂತನೆ



ಭಾರತದ ಪ್ರತಿಯೊಂದು ಮನೆಯಲ್ಲೂ ಸ್ಕೌಟ್ ಮತ್ತು ಗೈಡ್‌ಗಳಂತಹ ಮಕ್ಕಳಿರಬೇಕೆಂದು ನಾನು ಅಪೇಕ್ಷಿಸುತ್ತೇನೆ.

-ಮಹಾತ್ಮ ಗಾಂಧಿ



ನನ್ನ ದೃಷ್ಟಿಯಲ್ಲಿ ಸ್ಕೌಟ್ ಮತ್ತು ಗೈಡ್‌ಗಳು ಅತ್ಯುತ್ತಮ ಆಸ್ತಿ. ಅವರು ಹೆಚ್ಚು ವಿಕಾಸಗೊಂಡಷ್ಟು ರಾಷ್ಟ್ರಕ್ಕೆ ಹೆಚ್ಚು ಒಳಿತಾಗುತ್ತದೆ.

-ಜವಾಹರಲಾಲ್ ನೆಹರು



ನನಗೇನಾದರೂ ಒಂದು ಡಜನ್ ಮಕ್ಕಳಿದ್ದಿದ್ದರೆ ಅವರಲ್ಲಿ ಪ್ರತಿಯೊಬ್ಬನನ್ನೂ ಸ್ಕೌಟ್ ಮತ್ತು ಗೈಡ್ ಚಳವಳಿಗೆ ಕಳುಹಿಸುತ್ತಿದ್ದೆ.

-ಡಾ॥ ಅನಿ ಬೆಸೆಂಟ್



ರಾಷ್ಟ್ರಸೇವೆಯ ಆದರ್ಶವನ್ನು ಹರಡಲು ಸ್ಕೌಟ್ ಮತ್ತು ಗೈಡ್ ಚಳವಳಿ ಮಹತ್ವದ ಪಾತ್ರ ವಹಿಸಿದೆ.

-ಇಂದಿರಾ ಗಾಂಧಿ



20ನೆಯ ಶತಮಾನದಲ್ಲಿ ಶಿಕ್ಷಣ ಕ್ಷೇತ್ರಕ್ಕೆ ಅತ್ಯಂತ ಮಹತ್ವದ ಕೊಡುಗೆ ಬಂದಿರುವುದು ಶಿಕ್ಷಣತಜ್ಞರಿಂದಲ್ಲ; ಸ್ಕೌಟ್ ಚಳವಳಿಯನ್ನು ಸ್ಥಾಪಿಸಿದ ಸಿಪಾಯಿಯಿಂದ.

-ಜಾರ್ಜ್ ಬರ್ನಾರ್ಡ್ ಷಾ



ಸ್ಕೌಟ್ ಗೈಡ್ ಇದು ಮೂಲತಃ ಚಾರಿತ್ರ್ಯ ಬೆಳೆಸುವ ಒಂದು ಚಳವಳಿಯಾಗಿದ್ದು, ನಮ್ಮ ರಾಷ್ಟ್ರದ ಅಷ್ಟೇ ಏಕೆ - ಇಡೀ ಪ್ರಪಂಚದ ಪ್ರಜಾಪ್ರಭುತ್ವ ಸಮಾಜದ ಭಾರವನ್ನು ಹೊರಲು,ಹಾಗೂ ನಾವು ಯೋಗ್ಯ ನಾಗರಿಕರಾಗಲು ತರಬೇತಿ ನೀಡುತ್ತದೆ.

- ಎಸ್. ನಿಜಲಿಂಗಪ್ಪ

ಮೂಲ - ರಾಜ್ಯ ದಾಖಲೆ ಸಂಗ್ರಹ ಮತ್ತು ವಾರ್ತಾಕೇಂದ್ರ


## ಪ್ರಕಾಶಕರು

ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್, ಕರ್ನಾಟಕ

ರಾಜ್ಯ ಕಛೇರಿ, ಪ್ರೊ. ಪಿ. ಶಿವಶಂಕರ್ ವೃತ್ತ, ಕೊಂಡಜ್ಜಿ ಬಸಪ್ಪ ರಸ್ತೆ, ಕೋಟೆ, ಬೆಂಗಳೂರು-560 002.

ದೂರವಾಣಿ : ಕೇಂದ್ರ ಕಛೇರಿ/ಸ್ಕೌಟ್ ವಿಭಾಗ : 670 1227, ಗೈಡ್ ವಿಭಾಗ : 226 7470